KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಮೇ ೪, ೨೦೦೬ (ವೈಶಾಖ ೧೪, ಶಕ ವರ್ಷ ೧೯೨೮) | ಸಂಚಿಕೆ ೧೮ |
|---|---|---|

## ಭಾಗ - ೪ -ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

### ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ನಅಇ 21 ಬೆಂ ರೂ ಪ್ರಾ 2006, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2006**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ, 1987 ರ ಕಲಂ 3(3) (ಎ) ಮತ್ತು (4) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರಾಜಶೇಖರ ಬಿನ್ ಶ್ರೀ ವಿಷಕಂಠಯ್ಯ, ನಂ: 63, ಹಳೇ ಬಸ್ ನಿಲ್ದಾಣ, ರಾಮನಗರಂ ಟೌನ್, ರಾಮನಗರಂ ತಾಲ್ಲೂಕು ಇವರನ್ನು ರಾಮನಗರ-ಚನ್ನಪಟ್ಟಣ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ 3 ವರ್ಷದ ಅವಧಿಗೆ ಅಥವಾ ಸರ್ಕಾರ ಇಚ್ಛಿಸುವವರೆವಿಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 807

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

### ಸಹಕಾರ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 13 ಸಿಎನ್ಎಸ್ 2006, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನ ವಿವಿಧ 04 ವ್ಯವಸಾಯ ಸೇವಾ ಸಹಕಾರ ಸಂಘ/ಬ್ಯಾಂಕುಗಳ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ದೊಡ್ಡಸೋಮೆನಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ.,**

1. ಶ್ರೀ ತಿಮ್ಮರಾಯಪ್ಪ, ಕೆಂಚನಹಳ್ಳಿ.
2. ಶ್ರೀಮತಿ ರೇಣುಕಮ್ಮ ಕೋಂ ನಾಗರಾಜು, ದೊಡ್ಡಸೋಮೆನಹಳ್ಳಿ
3. ಶ್ರೀ ಕೆಂಚಯ್ಯ ಬಿನ್ ಶಿವನಂಜಯ್ಯ, ಕೆಂಚನಹಳ್ಳಿ

**ಮಾಡದಾಳ್ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ.,**

1. ಶ್ರೀ ಕೆಂಪಗುಡ್ಡಯ್ಯ ಬಿನ್ ಕದಿರಂಗಯ್ಯ, ಕಲಾರಪಾಳ್ಯ
2. ಶ್ರೀಮತಿ ಮಂಗಳಗೌರಮ್ಮ ಕೋಂ ಬಸವರಾಜು, ಉಡುವೆಗೆರೆ
3. ಶೀ ನಾಗರಾಜು ಬಿನ್ ನಡುಕೊಡಯ್ಯ, ಉ:ಕರಿಯಪ್ಪ, ಮಾನಗಲ್ಲು

**ಕುದೂರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ.,**

1. ಶ್ರೀ ಎ. ರಾಮಚಂದ್ರಪ್ಪ ಬಿನ್ ದೊಡ್ಡಅಡವಪ್ಪ, ಕುದೂರು ಟೌನ್ (ಅಂತರಗಂಗೆಪಾಳ್ಯ) ಕುದೂರು, ಮಾಗಡಿ ತಾ:
2. ಶ್ರೀ ನರಸಿಂಹಮೂರ್ತಿ ಬಿನ್ ಅದಿರಾಜಯ್ಯ, ಬೈರವೇಶ್ವರ ನಗರ, ಕುದೂರು, ಮಾಗಡಿ ತಾ:
3. ಶ್ರೀಮತಿ ಪದ್ಮ ಕೋಂ ಚಿಕ್ಕೇಗೌಡ, ಅಜ್ಜಹಳ್ಳಿ ಗ್ರಾಮ, ಕುದೂರು ಹೋಬಳಿ, ಮಾಗಡಿ ತಾ:

**ಬೆಟ್ಟಹಳ್ಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ.,**

1. ಶ್ರೀ ಎಸ್.ಜಿ. ಹನುಮಂತೇಗೌಡ ಬಿನ್ ಗಂಗಪ್ಪ, ಶ್ರೀ ಗಿರಿಪುರ, ಕುದೂರು ಹೋಬಳಿ ಮಾಗಡಿ ತಾ:
2. ಶ್ರೀ ಎಸ್.ಸಿ. ವೆಂಕಟೇಶ್ ಬಿನ್ ಲಕ್ಕಯ್ಯ (ದಾಸಪ್ಪ) ಕಾಗಿಮಡು, ಅದರಂಗಿ ಅಂಚೆ, ಕುದೂರು ಹೋಬಳಿ ಮಾಗಡಿ ತಾಲ್ಲೂಕು
3. ಶ್ರೀಮತಿ ಗಂಗಮ್ಮ ರಾಜಣ್ಣ, ಕಾಗಿಮಡು, ಅದರಂಗಿ ಅಂಚೆ, ಕುದೂರು ಹೋಬಳಿ ಮಾಗಡಿ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 808

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 14 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕಿನ ತ್ಯಾಮಗೊಂಡ್ಲು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ತ್ಯಾಮಗೊಂಡ್ಲು ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಲಕ್ಷ್ಮಿನರಸಿಂಹಯ್ಯ ಬಿನ್ ಮಾರೇಗೌಡ, ದೊಡ್ಡಬೆಲೆ ರೈಲ್ವೆ ಸ್ಟೇಷನ್
2. ಶ್ರೀಮತಿ ಲೀಲಾವತಿ ಕೋಂ ಚಂದ್ರಶೇಖರಯ್ಯ, ತ್ಯಾಮಗೊಂಡ್ಲು
3. ಶ್ರೀ ಕೃಷ್ಣಪ್ಪ ಬಿನ್ ಪಾಪಣ್ಣ, ಎ.ಕೆ. ಕಾಲೋನಿ, ತ್ಯಾಮಗೊಂಡ್ಲು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 809

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 15 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ಕನಸವಾಡಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಕನಸವಾಡಿ ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀಮತಿ ಪ್ರೇಮ ಕೋಂ ಹೊನ್ನಗಂಗಯ್ಯ, ಪುರುಷನಹಳ್ಳಿ
2. ಶ್ರೀ ನಾಗರಾಜ ಬಿನ್ ಮುನಿಗಂಗಯ್ಯ, ಅಲೇನಹಳ್ಳಿ
3. ಶ್ರೀ ನಂಜಪ್ಪ ಬಿನ್ ಮಾಯಗಪ್ಪ, ಹೊನ್ನಾಪುರ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 810

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 16 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಎಂ. ರಾಮಯ್ಯ ಬಿನ್ ಮುತ್ತರಾಯಪ್ಪ, ಹುಜುಗೂರು, ತಿಪ್ಪೇನಹಳ್ಳಿ ಅಂಚೆ, ಶಿಡ್ಲಘಟ್ಟ ತಾಲ್ಲೂಕು, ಕೋಲಾರ ಜಿಲ್ಲೆ ಇವರನ್ನು ತೋಟದ ಬೆಳೆಗಾರರ ಸಹಕಾರ ಮಾರಾಟ ಮತ್ತು ಸಂಸ್ಕರಣ ಸಂಘ ನಿ, (ಹಾಪ್‌ಕಾಮ್ಸ್) ಲಾಲ್‌ಬಾಗ್, ಬೆಂಗಳೂರು ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 811

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 17 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಧಾವಾಡ ಜಿಲ್ಲಾ ನವಲಗುಂದ ತಾಲ್ಲೂಕಿನ ಜಾವೂರ

ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಜಾವೂರ ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಭೀಮಪ್ಪ ಯಲ್ಲಪ್ಪ ಭಜೇಂತ್ರಿ
2. ಶ್ರೀಮತಿ ಕರೇವ್ವ ಕೋಂ ಭೀಮಪ್ಪ ಕಳಮುಡಿ
3. ಶ್ರೀ ಹನುಮಂತಪ್ಪ ಮಲ್ಲಪ್ಪ ಧೂಳಣ್ಣವರ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 812

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 18 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ವಿಜಾಪುರ ಜಿಲ್ಲಾ ಸಿಂಧಗಿ ತಾಲ್ಲೂಕಿನ ಬಗಲೂರು ಗ್ರಾಮದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಬಗಲೂರು ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ವಿಠೋಬ ಸೋಮಲಿಂಗಪ್ಪ, ಮಾಗಣಗೇರಿ, ಬಗಲೂರು
2. ಶ್ರೀಮತಿ ಇಂದಿರಾಭಾಯಿ ಲಕ್ಷ್ಮಣ ರಮಗಾ, ಬಗಲೂರು
3. ಶ್ರೀಮತಿ ಕಲ್ಲವ್ವ ಸಿದ್ದರಾಮಪ್ಪ ಹರಿಜನ್

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 813

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 20 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1) ಮತ್ತು ಕಲಂ 53ಎ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ದಾವಣಗೆರೆ ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ಪ್ರಕರಣ 29(1)ರ ಅಡಿಯಲ್ಲಿ**

1. ಶ್ರೀಮತಿ ಬಿ.ಎಂ. ನಾಗವೀಣ ಕೋಂ ಬಿ. ಮಹದೇವಪ್ಪ, ಕುಂಬಳೂರು ಗ್ರಾಮ, ಹರಿಹರ ತಾಲ್ಲೂಕು.
2. ಶ್ರೀ ಜೆ.ಆರ್. ಷಣ್ಮುಖಪ್ಪ ಬಿನ್ ರೇವಪ್ಪ, ಆಯುರ್ವೇದಿಕ್ ಆಸ್ಪತ್ರೆ ರಸ್ತೆ, ಎಂ.ಸಿ.ಸಿ. ಎ-ಬ್ಲಾಕ್, ದಾವಣಗೆರೆ.
3. ಶ್ರೀ ಕುಬೇರನಾಯ್ಕ ಬಿನ್ ಸೋಮ್ಲನಾಯ್ಕ, ಗಂಟ್ಯಾಪುರ, ಹೊನ್ನಾಳಿ ತಾಲ್ಲೂಕು.

**ಪ್ರಕರಣ 53ಎ ರ ಅಡಿಯಲ್ಲಿ**

1. ಶ್ರೀ ಸ್. ಷಣ್ಮುಖಪ್ಪ ಬಿನ್ ಗೂಳಪ್ಪ, ಹಳೇಪೇಟೆ, ಹೊನ್ನಾಳಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 814

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 21 ಸಿಎನ್‌ಎಸ್ 2006, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕಿನ ನೆರೆಗ್ಯಾತನಹಳ್ಳಿ ಗ್ರಾಮದ ಮತ್ತು ಬನ್ನೂರು ಪಟ್ಟಣದ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಇವರುಗಳ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ನೆರೆಗ್ಯಾತನಹಳ್ಳಿ ಗ್ರಾಮದ ರೇಷ್ಮೆ ಬೆಳೆಗಾರರ ಸೇವಾ ಸಹಕಾರ ಸಂಘ ನಿ.**

1. ಶ್ರೀ ನಾಗೇಶ ಬಿನ್ ವೀರಭದ್ರಪ್ಪ, ಚಿದರವಳ್ಳಿ ಗ್ರಾಮ, ಸೋಸಲೆ ಹೋಬಳಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ
2. ಶ್ರೀಮತಿ ಚಂದ್ರಮ್ಮ ಕೋಂ ಗುರುಬಸಪ್ಪ, ಅರೆಬೊಮ್ಮನಹಳ್ಳಿ, ಸೋಸಲೆ ಹೋಬಳಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ.
3. ಶ್ರೀ ನಂಜುಂಡಯ್ಯ ಬಿನ್ ಲೇ. ದೇವರಗುಡ್ಡಯ್ಯ, ನೆರೆಗ್ಯಾತನಹಳ್ಳಿ ಗ್ರಾಮ, ಸೋಸಲೆ ಹೋಬಳಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ.

**ಬನ್ನೂರು ಪಟ್ಟಣದ ವ್ಯವಸಾಯ ಸೇವಾ ಸಹಕಾರ ಸಂಘ ನಿ.**

1. ಶ್ರೀ ಬಿ. ರಮೇಶ್ ಬಿನ್ ಕೆ. ಬಸವೇಗೌಡ, ಎಸ್.ಆರ್.ಪಿ. ರಸ್ತೆ, ಬನ್ನೂರು, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ.
2. ಶ್ರೀ ಎಸ್. ಭೈರವ ಬಿನ್ ದೊಡ್ಡಸಿದ್ದಯ್ಯ, ಕೆ.ಇ.ಬಿ. ಹತ್ತಿರ, ಜೈಭೀಮ್ ನಗರ, ಬನ್ನೂರು, ಟಿ. ನರಸೀಪುರ ತಾಲ್ಲೂಕು ಮೈಸೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 815

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 22 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನ ಹುಲಿಕಲ್ಲು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ರಂಗರಾಮಯ್ಯ ಬಿನ್ ಶ್ರೀ ಪುಟ್ಟರಂಗಯ್ಯ ಹೊಸಹಳ್ಳಿ
2. ಶ್ರೀ ಗಂಗಯ್ಯ ಬಿನ್ ಶ್ರೀ ಹಲಗಯ್ಯ, ಲಕ್ಕೇನಹಳ್ಳಿ
3. ಶ್ರೀಮತಿ ಅನುಸೂಯಮ್ಮ ಕೋಂ ಶ್ರೀ ಶಶಿಧರ, ಹುಲಿಕಲ್ಲು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 816

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 23 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ವಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಬ್ಯಾಂಕ್ ನಿ. ಮುದ್ದೇಬಿಹಾಳ ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀಮತಿ ಗಂಗಮ್ಮ ಕೋಂ ಭೀಮಣ್ಣ ಚೌದ್ರಿ, ಸಾ: ಗೊಟಕುಣಕಿ, ತಾ: ಮುದ್ದೇಬಿಹಾಳ
2. ಶ್ರೀ ಭೀಮಣ್ಣ ಕನಕಪ್ಪ ದಾಸರ, ಸಾ: ಮುದ್ದೇಬಿಹಾಳ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 817

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 24 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮತ್ತು ವ್ಯವಸಾಯೋಪನ್ನ ಮಾರಾಟ ಸಹಕಾರ ಸಂಘ ನಿ., ರಾಣೆಬೆನ್ನೂರು ಇವುಗಳ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

**ರಾಣೆಬೆನ್ನೂರು ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ.,**

1. ಶ್ರೀ ಬಸವರಾಜಪ್ಪ, ಕರಸಬಸಪ್ಪ ಬುರಡೀಕಟ್ಟಿ, ಸಾ: ಮಾಕನೂರು ತಾ: ರಾಣೆಬೆನ್ನೂರು
2. ಶ್ರೀ ಹನುಮಗೌಡ ಹೆಚ್. ಮುದುಕನಗೌಡರ್, ಸಾ: ನಾಗೇನಳ್ಳಿ, ತಾ: ರಾಣೆಬೆನ್ನೂರು
3. ಶ್ರೀಮತಿ ಯಶೋದಮ್ಮ ಗದಿಗಪ್ಪ ಬುಡಮಣ್ಣವರ್, ಸಾ: ತುಮ್ಮಿನಕಟ್ಟೆ, ತಾ: ರಾಣೆಬೆನ್ನೂರು

**ರಾಣೆಬೆನ್ನೂರು ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ,**

1. ಶ್ರೀ ಹೊನ್ನಪ್ಪ ಹನುಮಂತಪ್ಪ ರಾಮಗೌಡ್ರು, ಸಾ: ಕರೂರು ತಾ: ರಾಣೆಬೆನ್ನೂರು
2. ಶ್ರೀ ನಾಗರಾಜ ರಂಗಪ್ಪ ಭಾರ್ಕಿ, ಕವಲೆತ್ತು, ತಾ: ರಾಣೆಬೆನ್ನೂರು
3. ಶ್ರೀಮತಿ ಲಕ್ಷ್ಮಿ ವಿದ್ಯಾದರ್ ಮುಂಡಾಸದ, ಮೆಡ್ಲೇರಿ, ತಾ: ರಾಣೆಬೆನ್ನೂರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 818

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

**ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 27 ಸಿಎಸ್‌ಎಸ್ 2006, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2006**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕು ಬನ್ನಿಕೋಡು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ. ಬನ್ನಿಕೋಡು ಇದರ ಆಡಳಿತ ಮಂಡಳಿಗಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1. ಶ್ರೀ ಜಿ.ವಿ. ಲಕ್ಷ್ಮಣ ಬಿನ್ ವೀರಪ್ಪ
2. ಶ್ರೀ ಉದ್ದಾರ ತಿಪ್ಪಣ್ಣ ಬಿನ್ ರೇವಣ್ಣಪ್ಪ
3. ಶ್ರೀಮತಿ ಲಕ್ಷ್ಮಮ್ಮ ಕೋಂ ಸಿದ್ದಪ್ಪದೋಣಪ್ಪ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 819

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ-1, ಸಹಕಾರ ಇಲಾಖೆ.

## ಸಾರಿಗೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಾರಿಇ 405 ಟಿಎಂಎ 2003, ಬೆಂಗಳೂರು, ದಿನಾಂಕ: 4ನೇ ಏಪ್ರಿಲ್ 2006

ಮೋಟಾರು ವಾಹನ ಅಧಿನಿಯಮ, 1988ರ (1988ರ ಕೇಂದ್ರ ಅಧಿನಿಯಮ 59)ರ ಪ್ರಕರಣ 67ರ ಉಪ-ಪ್ರಕರಣ (1)ರ ಖಂಡ(i)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಟೋರಿಕ್ಷಾ ಚಾಲಕರ ನಡುವಿನ ಅನಗತ್ಯ ಸ್ಪರ್ಧೆಯನ್ನು ತಡೆಯುವ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಈ ಅಧಿಸೂಚನೆಯ ಅನುಬಂಧ-1ರ ಅಂಕಣ (2)ರಲ್ಲಿ ನಮೂದಿಸಿರುವ ಪ್ರಯಾಣ ದರ ಹಾಗೂ ಸಾಗಣೆ ದರಗಳನ್ನು ಅಂಕಣ(3)ರಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳಗಳಿಗೆ ಮತ್ತು ಅಂಕಣ(1)ರಲ್ಲಿ ನಮೂದಿಸಿರುವ ದೂರಗಳಿಗೆ ಮೈಸೂರು ನಗರ ಗ್ರಾಮಾಂತರ ಬಸ್ ನಿಲ್ದಾಣದಿಂದ ಹೊರಡುವ ಆಟೋರಿಕ್ಷಾಗಳಿಗೆ ಪ್ರೀ-ಪೇಯ್ಡ್ ದರಗಳನ್ನು ನಿಗದಿಪಡಿಸಲು ಮತ್ತು ಅನುಬಂಧ-2ರಲ್ಲಿ ಸರಕು ಸಾಗಾಣೆ ಬಾಡಿಗೆ ದರ ನಿಗಡಿದಪಡಿಸಲು ರಾಜ್ಯ ಪ್ರಾದೇಶಿಕ ಸಾರಿಗೆ ಪ್ರಾಧಿಕಾರಕ್ಕೆ ಹಾಗೂ ಮಸೂರು ಪ್ರಾದೇಶಿಕ ಸಾರಿಗೆ ಪ್ರಾಧಿಕಾರಕ್ಕೆ ಈ ಮೂಲಕ ನಿರ್ದೇಶನ ನೀಡಿದೆ. ಅಂದರೆ;

### ಅನುಬಂಧ-1

ಗ್ರಾಮಾಂತರ ಬಸ್ ನಿಲ್ದಾಣ, ಮೈಸೂರು, ಇಲ್ಲಿಂದ ವಿವಿಧ ಬಡಾವಣೆಗಳಿಗೆ ಇರುವ ದೂರ (ಕಿ.ಮೀ.ಗಳಲ್ಲಿ) ಹಾಗೂ ನಿಗದಿಪಡಿಸಿರುವ ಆಟೋ ದರಗಳು:

| ದೂರದ ಅಂತರ (ಕಿ.ಮೀ.) ಕನಿಷ್ಠ - ಗರಿಷ್ಠ | ಬಾಡಿಗೆ ದರ (ರೂ.ಗಳಲ್ಲಿ) | ಸ್ಥಳಗಳು |
|---|---|---|
| 1–2 | 10.00 | ಎನ್.ಆರ್. ಮೊಹಲ್ಲ |
| | | ರಾಜೇಂದ್ರನಗರ |
| | | ಫೌಂಟನ್ ಸರ್ಕಲ್ ರೇಸ್ ಕೋರ್ಸ್ |
| | | ರೈಲ್ವೇಸ್ಟೇಷನ್ |
| | | ಜಿಲ್ಲಾಧಿಕಾರಿಗಳ ಕಛೇರಿ |
| | | ಕ್ರಾಪರ್ಡ್ ಹಾಲ್ |
| | | ಎಸ್.ಪಿ. ಆಫೀಸ್ |
| 2–3 | 15.00 | ಜಿ.ಎಸ್.ಎಸ್. ಪಬ್ಲಿಕ್ ಸ್ಕೂಲ್ |
| | | ಸಿದ್ಧಾರ್ಥ ಲೇಔಟ್ |
| | | ಟೆರಿಷಿಯನ್ ಕಾಲೇಜ್ |
| | | ಜಾಕಿ ಕ್ವಾರ್ಟರ್ಸ್ |
| | | ಬನುಮಯ್ಯ ಪಾಲಿಟೆಕ್ನಿಕ್ ಅಥವಾ ಪಿ ಅಂಡ್ ಟಿ ಕ್ವಾರ್ಟರ್ಸ್ |
| | | ಕೆಸರೆ |
| | | ಚಾಮುಂಡಿಪುರಂ ಸರ್ಕಲ್ |
| | | ರಾಮಸ್ವಾಮಿ ವೃತ್ತ |
| | | ಬಲ್ಲಾಳ ಸರ್ಕಲ್ |
| | | ಜೆ.ಎಸ್.ಎಸ್. ಮೆಡಿಕಲ್ ಸರ್ಕಲ್ |
| 3–4 | 20.00 | ಆಲನಹಳ್ಳಿ ಪಾರ್ಕ್ |
| | | ನಾಯ್ಡುನಗರ |
| | | ಸರಸ್ವತಿ ಟಾಕೀಸ್ |
| | | ಸಿದ್ದೀಕಿ ಮೊಹಲ್ಲಾ |
| | | ಬನ್ನಿಮಂಟಪ ಬಡಾವಣೆ |
| | | ಬೋಗಾದಿ ಬಡಾವಣೆ |
| 4–5 | 25.00 | ಎನ್.ಐ.ಇ. ಕಾಲೇಜ್ |
| | | ಲಲಿತ ಮಹಲ್ |
| | | ವಿದ್ಯಾರಣ್ಯಪುರಂ ಸ್ವರ್ಲಿಂಗ್ ಟಾಕೀಸ್ |
| | | ವಿಜಯಬ್ಯಾಂಕ್ ಡಬ್ಬಲ್ ರೋಡ್, ಕುವೆಂಪುನಗರ |
| | | ಸರಸ್ವತಿಪುರಂ ಬೇಕ್ ಪಾಯಿಂಟ್ |
| | | ಅಕ್ಷಯ ಭಂಡಾರ್ |
| | | ಗೋಕುಲಂ |
| | | ಬಿ.ಎಂ. ಆಸ್ಪತ್ರೆ |
| | | ಮುಕ್ತ ವಿಶ್ವವಿದ್ಯಾನಿಲಯ (ಓಪನ್ ಯೂನಿವರ್ಸಿಟಿ) |
| | | ಪಡುವಾರಳ್ಳಿ |

| ದೂರದ ಅಂತರ (ಕಿ.ಮೀ.) ಕನಿಷ್ಠ – ಗರಿಷ್ಠ | ಬಾಡಿಗೆ ದರ (ರೂ.ಗಳಲ್ಲಿ) | ಸ್ಥಳಗಳು |
|---|---|---|
| 5–6 | 30.00 | ಬೃಂದಾವನ ಬಡಾವಣೆ |
| | | ಸ್ಯಾನಿಟೋರಿಯಂ |
| | | ಕುಂಬಾರಕೊಪ್ಪಲು |
| | | ಕುವೆಂಪುನಗರ ಕಾಂಪ್ಲೆಕ್ಸ್ |
| | | ಡಾಕ್ಟರ್ಸ್ ಕಾರ್ನರ್ |
| | | ವಿಜಯನಗರ (ಐಶ್ವರ್ಯ ಪೆಟ್ರೋಲ್ ಬಂಕ್) |
| | | ಸ್ಪೀಚ್ ಅಂಡ್ ಹಿಯರಿಂಗ್ |
| | | ಗಂಗೋತ್ರಿ ಲೇಔಟ್ |
| 6–7 | 35.00 | ಮೇಟಗಳ್ಳಿ ಬಡಾವಣೆ |
| | | ಜೆ.ಪಿ. ನಗರ ಗೊಬ್ಬಳಿಮರ |
| | | ಅಂದೋಲನ ಸರ್ಕಲ್ |
| | | ಶಾರದಾದೇವಿನಗರ |
| | | ವಿವೇಕಾನಂದ ಸರ್ಕಲ್ |
| | | ಬಂಡೀಪಾಳ್ಯ ಎ.ಪಿ.ಎಂ.ಸಿ. |
| | | ಜಿ.ಸಿ.ಇ. |

ಅನುಬಂಧ–2

ಸರಕು ಸಾಗಣೆ ಬಾಡಿಗೆ ದರವು ಈ ಕೆಳಗೆ ನಮೂದಿಸಿರುವ ದರಗಳಿಗಿಂತ ಮೀರಿರಕೂಡದು.

1. ಮೊದಲ 30 ಕೆ.ಜಿ.ತೂಕದವರೆಗಿನ ಸರಕನ್ನು ಉಚಿತವಾಗಿ ಸಾಗಿಸುವುದು.
2. ತದನಂತರ ಪ್ರತಿ 20 ಕೆ.ಜಿ. ಗಳಿಗೆ ಅಥವಾ ಅದರ ಭಾಗಕ್ಕೆ ರೂ.1.50ರಂತೆ ವಸೂಲಿ ಮಾಡುವುದು. (ವೈಯಕ್ತಿಕ ಲಗೇಜ್ ಅಂದರೆ ಸೂಟ್‌ಕೇಸ್, ಹ್ಯಾಂಡ್‌ಬ್ಯಾಗ್ ಹೊರತುಪಡಿಸಿ)
3. ಸೇವಾ ಶುಲ್ಕ ರೂ.1/– ಮಾತ್ರ.

**ಸೂಚನೆ:–** ರಾತ್ರಿ 10.00 ಗಂಟೆಯಿಂದ ಬೆಳಿಗ್ಗೆ 5 ಗಂಟೆವರೆಗೆ ಮೇಲೆ ನಮೂದಿಸಿದ ದರದ ಒಂದೂವರೆಪಟ್ಟಿಗಿಂತ ಮೀರಬಾರದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಿವರಾಮಶೆಟ್ಟಿ**

ಪಿ.ಆರ್. 832 ಪೀಠಾಧಿಕಾರಿ, ಸಾರಿಗೆ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ನ.ಅ.ಇ. 28 ಎಂ.ಎಲ್.ಆರ್. 2006 (B-11), ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2006**

ಕರ್ನಾಟಕ ಪುರಸಭೆ ಕಾಯಿದೆ 1964ರ ಪ್ರಕರಣದ 11(1)(b) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕೆಂಗೇರಿ ಪುರಸಭೆಗೆ ಸದಸ್ಯರನ್ನಾಗಿ ಸರ್ಕಾರವು ನಾಮ ನಿರ್ದೇಶನ ಮಾಡಿದೆ.

1. ಶ್ರೀ ಕೆ.ವೈ. ಕೃಷ್ಣ ಬಿನ್ ಯಲ್ಲಪ್ಪ, ನಂ.422, ರಾಮಮಂದಿರ ರಸ್ತೆ, ಕೆಂಗೇರಿ
2. ಶ್ರೀ ಸಿ. ಶಿವಕುಮಾರ್, ಬಿನ್ ವಿ. ಚನ್ನಪ್ಪ ನಂ.28, 6ನೇ ಮುಖ್ಯಸ್ತೆ, ವಿನಾಯಕನಗರ, ಕೆಂಗೇರಿ ಉಪನಗರ.
3. ಶ್ರೀ ಎ. ಮಂಜುನಾಥ್ ಬಿನ್ ಅನಂತಸುಬ್ಬರಾವ್, ನಂ.257, 1ನೇ ಸಿ ಮುಖ್ಯರಸ್ತೆ, ಕೆಂಗೇರಿ ಉಪನಗರ.
4. ಶ್ರೀ ರಾಜೇಂದ್ರ ಪ್ರಸಾದ್, ಬಿನ್ ಅನ್ವಿರಾಜ್, ನಂ.99, ಇ.ಡಬ್ಲ್ಯೂ.ಎಸ್. ಕೆಂಗೇರಿ ಉಪನಗರ.
5. ಶ್ರೀಮತಿ ಕೆ.ಎಂ. ತೇಜಸ್ವಿನಿ, ವೈಫ್ ಆಫ್ ಬಿ. ಸತೀಶ್, ನಂ.81, 2ನೇ ಮುಖ್ಯರಸ್ತೆ, 2ನೇ ಅಡ್ಡರಸ್ತೆ, ಮರಿಯಪ್ಪನಪಾಳ್ಯ, ಜ್ಞಾನಭಾರತಿ ಅಂಚೆ, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 836 **ಲಕ್ಷ್ಮಿನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ನಗರಾಭಿವೃದ್ಧಿ ಇಲಾಖೆ.

## COMMERCE AND INDUSTRIES SECRETARIAT

**NOTIFICATION No. CI.34:MMM.2005, Bangalore, Dated: 25th March 2006**

In pursuance of sub-section (1) of Section 5 of the Mines and Minerals (Development and Regulation) Act, 1957, and after obtaining approval of Government of India, Ministry of Coal and Mines, Department of Mines, New Delhi vide their letter No.5/46/2005-M.IV dated 08.07.2005 the Government of Karnataka hereby accords sanction for grant of Mining Lease for a period of 20 years (Twenty years only) in favour of Shri K.R.Kaviraj for Iron Ore over an area of 85-00 acres (Eighty five acres only) in Kallahalli village, Hospet taluk, Bellary district with the boundaries as mentioned below and as per the sketch furnished by the Director of Mines and Geology, Bangalore subject to compliance of the provisions of the Mines and Minerals (Development and Regulation) Act, 1957 and Mineral Concession Rules, 1960 as

amended from time to time and other applicable Acts and Rules including Forest (Conservation) Act, 1980.

**BOUNDARIES:-**

| | | | |
|---|---|---|---|
| On the North by | ML area of Sri H.P. Manjunath | On the South by | ML area of M/s.Auru Minerals |
| On the East by | Sandur State Forest | On the West by | ML area of Sri H.P. Manjunath |

Sanction of this Mining Lease is also subject to obtaining Forest clearance under Section 2 of Forest Conservation Act, 1980 and also subject to the terms and conditions appended hereto.

By Order and in the name of the Governor of Karnataka

**JAGADISH JOIS**

Under Secretary to Government (Mines)

Commerce & Industries Department.

**TERMS AND CONDITIONS OF THE MINING LEASE SANCTIONED IN GOVERNMENT NOTIFICATION NO.CI.34: MMM.2005 Dated 25.03.2006.**

a) Mining lease should be in respect of **Iron Ore** only. If other minerals are found in association with **Iron Ore,** they should be brought to the notice of Government and if the lessee desires to mine these minerals along with **Iron Ore,** he/she/it should do so only after the consent of Government is obtained in writing.

b) If berul or any other substance prescribed U/S 3 of the Atomic Energy Act, XXIX of 1948 is found to occur in the property under the lease, the lessee shall make available such mineral to the Government of India.

c) The lease shall also be subject to the provisions of Rules in Chapter IV of the Minerals Concession Rules, 1960.

d) The lease shall also be subject to the Rules, issued U/S 18 of the Mines & Minerals (D&R) Act, 1957.

e) The lessee shall pay to the Director of Mines and Geology in Karnataka, Bangalore, necessary Security Deposit for due observance of the terms and conditions of the lease in accordance with Rule 32 of the lease issued to him.

f) The lessee shall be governed by all conditions that may be incorporated in the lease deed, to be executed.

g) The lessee shall abide by the rules contained in the Karnataka State Forest Manual, if the lease area covers any forestland.

h) Government shall have the right of purchasing the ore at current market rates.

i) The lease would be determined if the lessee fails to commence execution of the lease deed.

j) The area mentioned above is subject to verification after actual survey and demarcation.

k) The lease shall be for a period of **Twenty Years.**

l) The lessee/s shall pay dead rent, cesses and royalty as detailed below:-

**DEAD RENT PAYABLE PER HECTARE PER ANNUM**

Ist year of the lease : Rs.100/-
2nd year to 5th year of the lease : Rs.140/-
6th year to 10th year of the lease : Rs.280/-
11th year of the lease & onwards : Rs.400/-

**Surface Rent:** Rs.2.50 per hectare per annum on the area used by the lessee/s for mining purposes.

**Local & other Cesses:** As prevalent in Bellary district.

**Royalty:** At the rate prescribed in Second Schedule to the Mines & Minerals (D&R) Act, 1957 and as amended from time to time.

m) The total area held by the applicant/s under mining lease including the present one, shall not exceed 10 Sq.Km.

n) Mining operations shall not be commenced/conducted unless a qualified manager and other supervisory staff are appointed as required under the Matalliferous Mines Regulations, 1961 and relevant notices are sent to the Director-General of Mines Safety, Dhanbad with a copy of the same to the concerned Director of Mines Safety.

**JAGADISH JOIS**

Under Secretary to Govt.(Mines)

Commerce & Industries Department.

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ
## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 31 ರಾಶಾಪ್ರ 2005, ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2006**

ಕರ್ನಾಟಕ (ನಗದು ಅನುದಾನಗಳ ರದ್ದಿಯಾತಿ) ಅಧಿನಿಯಮ, 1967 (1967ರ 15) ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ (ನಗದು ಅನುದಾನಗಳ ರದ್ದಿಯಾತಿ) ಅಧಿನಿಯಮ, 1967
### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**



### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1967ರ ಅಧಿನಿಯಮ 15:–** ಹೈದರಾಬಾದ್ ನಗದು ಅನುದಾನಗಳ ರದ್ದಿಯಾತಿ ಅಧಿನಿಯಮ, 1952ರ 3ನೇ ಪ್ರಕರಣದ ಮೇರೆಗೆ ಆ ಅಧಿನಿಯಮದ ಅನುಸೂಚಿಯ ಭಾಗ 'ಎ' ನಲ್ಲಿ ನಿರ್ದಿಷ್ಟಪಡಿಸಲಾದ ಎಲ್ಲ ನಗದು ಅನುದಾನಗಳನ್ನು, 1952ರ ಏಪ್ರಿಲ್ 1 ರಿಂದ ಜಾರಿಗೆ ಬರುವಂತೆ ನಿಲ್ಲಿಸಲಾಗಿತ್ತು ಮತ್ತು ಆ ಅನುಸೂಚಿಯ ಭಾಗ-'ಸಿ' ನಲ್ಲಿ ನಿರ್ದಿಷ್ಟಪಡಿಸಲಾದ ನಗದು ಅನುದಾನಗಳನ್ನು 1954ರ ಜುಲೈ 1 ರಿಂದ ನಿಲ್ಲಿಸಲಾಗಿತ್ತು. ಈ ಅಧಿನಿಯಮದ ಸಿಂಧುತ್ವವನ್ನು ಹೈದರಾಬಾದ್ ಉಚ್ಚ ನ್ಯಾಯಾಲಯದ ಮುಂದೆ ಪ್ರಶ್ನಿಸಲಾಗಿತ್ತು ಮತ್ತು ಉಚ್ಚ ನ್ಯಾಯಾಲಯವು ನಷ್ಟ ಪರಿಹಾರವನ್ನು ಸಂದಾಯ ಮಾಡದೆ ನಗದು ಅನುದಾನಗಳನ್ನು ರದ್ದುಪಡಿಸುವುದು ಕಾನೂನು ಬಾಹಿರವೆಂದು ಮತ್ತು ಅಧಿನಿಯಮದ 3ನೇ ಪ್ರಕರಣದ ಮೇರೆಗೆ ನಿಲ್ಲಿಸಲಾಗಿದ್ದ "ರುಸುಂ" ಗಳನ್ನು ಪಡೆಯಲು ಅರ್ಜಿದಾರರು ಹಕ್ಕುಳ್ಳವರೆಂದು ಎತ್ತಿ ಹಿಡಿಯಿತು. ಹೈದರಾಬಾದ್ ಸರ್ಕಾರವು ಉಚ್ಚ ನ್ಯಾಯಾಲಯದ ಆದೇಶಗಳ ವಿರುದ್ಧ ಸರ್ವೋಚ್ಚ ನ್ಯಾಯಾಲಯದಲ್ಲಿ ಅಪೀಲು ಹಾಕಿತು, ಆದರೆ ಅಪೀಲನ್ನು ಆಂಧ್ರ ಪ್ರದೇಶ ಸರ್ಕಾರವು ಆ ತರುವಾಯ ಹಿಂತೆಗೆದುಕೊಂಡಿತು. ನಗದು ಅನುದಾನಗಳ ರದ್ದಿಯಾತಿ ಮತ್ತು ರದ್ದಿಯಾತಿಗೆ ಸಂಬಂಧಿಸಿದಂತೆ ನಷ್ಟ ಪರಿಹಾರದ ಸಂದಾಯಕ್ಕೆ ವ್ಯವಸ್ಥೆ ಮಾಡುವ ಸಲುವಾಗಿ, ಆಂಧ್ರ ಪ್ರದೇಶದ ವಿಧಾನ ಮಂಡಲವು, ಆಂಧ್ರ ಪ್ರದೇಶ (ನಗದು ಅನುದಾನಗಳ ರದ್ದಿಯಾತಿ) ಅಧಿನಿಯಮ, 1959ನ್ನು ಅಂಗೀಕರಿಸಿತು. ಮಹಾರಾಷ್ಟ್ರ ಸರ್ಕಾರವೂ ಸಹ ನಗದು ಅನುದಾನಗಳ ರದ್ದಿಯಾತಿಗಾಗಿ ಮತ್ತು ನಷ್ಟ ಪರಿಹಾರದ ಸಂದಾಯಕ್ಕಾಗಿ ಕಾನೂನು ರಚನೆ ಮಾಡಲು ಕ್ರಮಕೈಗೊಳ್ಳುತ್ತದೆ. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿನ ನಗದು ಅನುದಾನಗಳ ಪದ್ಧತಿಯನ್ನು ರದ್ದುಪಡಿಸಲು ಕಾನೂನು ರಚನೆಯು ಅವಶ್ಯಕವೆಂದು ಪರಿಗಣಿಸಲಾಯಿತು.

ಆದ್ದರಿಂದ ವಿಧೇಯಕ.

(ದಿನಾಂಕ 26.7.1967ರಂದು ಕರ್ನಾಟಕ ರಾಜ ಪತ್ರ (ವಿಶೇಷ ಸಂಚಿಕೆ)ದ ಭಾಗ-IV-2 ಎ ಸಂಖ್ಯೆ 155, ಪುಟ 7 ರಲ್ಲಿ ಪ್ರಕಟಿಸಲಾಗಿದೆ).

**1967ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 15**

**(1967ರ ಡಿಸೆಂಬರ್ ಇಪ್ಪತ್ತೊಂದನೇ ದಿನಾಂಕದಂದು [1][ಕರ್ನಾಟಕ ರಾಜ ಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)**

(1967ರ ಡಿಸೆಂಬರ್ ಹನ್ನೊಂದನೇ ದಿನಾಂಕದಂದು ರಾಷ್ಟ್ರಪತಿಯವರ ಅನುಮತಿಯನ್ನು ಪಡೆದಿದೆ.)

## [1][ಕರ್ನಾಟಕ][1] (ನಗದು ಅನುದಾನಗಳ ರದ್ದಿಯಾತಿ) ಅಧಿನಿಯಮ, 1967.

**[1][ಕರ್ನಾಟಕ ರಾಜ್ಯ][1] ದ [1][ಗುಲ್ಬರ್ಗಾ ಪ್ರದೇಶ][1] ದ ಕೆಲವು ವರ್ಗಗಳ ನಗದು ಅನುದಾನಗಳನ್ನು ನಿಲ್ಲಿಸಲು ಒಂದು ಅಧಿನಿಯಮ.**

[1][ಕರ್ನಾಟಕ ರಾಜ್ಯದ][1] [1][ಗುಲ್ಬರ್ಗಾ ಪ್ರದೇಶದ][1] ಕೆಲವು ವರ್ಗಗಳನ್ನು ನಗದು ಅನುದಾನಗಳ ನಿಲ್ಲಿಸುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಹದಿನೆಂಟನೇ ವರ್ಷದಲ್ಲಿ [1][ಕರ್ನಾಟಕ][1] ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು, ಎಂದರೆ:-

1. **ಚಿಕ್ಕ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] (ನಗದು ಅನುದಾನಗಳ ರದ್ದಿಯಾತಿ) ಅಧಿನಿಯಮ, 1967 ಎಂದು ಕರೆಯತಕ್ಕದ್ದು.

(2) ಇದು [1][ಕರ್ನಾಟಕ ರಾಜ್ಯ][1]ದ [1][ಗುಲ್ಬರ್ಗಾ ಪ್ರದೇಶ ][1]ಕ್ಕೆ ವ್ಯಾಪ್ತವಾಗುತ್ತದೆ.

(3) ಇದು ಕೂಡಲೇ ಜಾರಿಗೆ ಬರತಕ್ಕದ್ದು.

2. **ಪರಿಭಾಷೆಗಳು:-** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಸರ್ಕಾರ" ಎಂದರೆ ರಾಜ್ಯ ಸರ್ಕಾರ;

(ಬಿ) "ಧರ್ಮಾದಾಯ ಸಂಸ್ಥೆ " ಎಂದರೆ, ಧರ್ಮಾರ್ಥ, ಧರ್ಮಾದಾಯ ಅಥವಾ ಲೋಕೋಪಕಾರಿ ಉದ್ದೇಶಗಳಿಗಾಗಿ ಸಾಮಾನ್ಯವಾಗಿ ಸಾರ್ವಜನಿಕರ ಅಥವಾ ಅದರ ಯಾವುದೇ ಸಮುದಾಯ ಅಥವಾ ಭಾಗಕ್ಕೆ ಸಮರ್ಪಿತವಾದ ಅಥವಾ ಅವರ ಸೌಲಭ್ಯಕ್ಕಾಗಿ ಇರುವ ಅಥವಾ ಅವರು ರೂಢಿಗತವಾಗಿ ಆಚರಿಸಿಕೊಂಡು ಬಂದ ಮತ್ತು ಒಂದು ನಿರ್ದಿಷ್ಟ ಸ್ಥಳ ಹಾಗೂ ಪರಿಚಿತ ವಿಳಾಸವನ್ನು ಹೊಂದಿರುವ ಯಾವುದೇ ಧರ್ಮಾದಾಯ ಸಂಸ್ಥೆ;

(ಸಿ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳಿಂದ ನಿಯಮಿಸಲಾದುದು;

(ಡಿ) "ಧಾರ್ಮಿಕ ಸಂಸ್ಥೆ " ಎಂದರೆ, ಸಾರ್ವಜನಿಕ ಪೂಜಾ ಸ್ಥಳವಾಗಿ, ಸಾಮಾನ್ಯವಾಗಿ ಸಾರ್ವಜನಿಕರ ಅಥವಾ ಅದರ ಯಾವುದೇ ಸಮುದಾಯ ಅಥವಾ ಭಾಗಕ್ಕೆ ಸಮರ್ಪಿತವಾದ ಅಥವಾ ರೂಢಿಗತವಾಗಿ ಆಚರಿಸಿಕೊಂಡು ಬಂದ ಮತ್ತು ಒಂದು ನಿರ್ದಿಷ್ಟ ಸ್ಥಳ ಹಾಗೂ ಪರಿಚಿತ ವಿಳಾಸವನ್ನು ಹೊಂದಿರುವ ಯಾವುದೇ ಧಾರ್ಮಿಕ (ಮಂದಿರ, ಪುಣ್ಯಕ್ಷೇತ್ರ, ಮಸೀದಿ ಅಥವಾ ಅಂಥ ಯಾವುದೇ ಇತರ) ಸಂಸ್ಥೆ.

3. **ಅಧಿನಿಯಮದ ಅನ್ವಯ:-** (1) ಈ ಅಧಿನಿಯಮವು (2)ನೇ ಉಪ ಪ್ರಕರಣದಲ್ಲಿ ನಮೂದಿಸಿದವುಗಳನ್ನು ಹೊರತುಪಡಿಸಿ, ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ನಗದು ಅನುದಾನಕ್ಕೆ ಅನ್ವಯವಾಗತಕ್ಕದ್ದು.

(2) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ಯಾವುದೇ ಧಾರ್ಮಿಕ ಅಥವಾ ಧರ್ಮಾದಾಯ ಸಂಸ್ಥೆಯ ಹೆಸರಿನಲ್ಲಿ ಅಥವಾ ಅದರ ಬೆಂಬಲಕ್ಕಾಗಿ ನೀಡಲಾದಂಥ ಅಥವಾ ಯಾವುದೇ ಧಾರ್ಮಿಕ ಅಥವಾ ಧರ್ಮಾದಾಯ ಸಂಸ್ಥೆಗೆ ಸಂಬಂಧಿಸಿದ ಸಾರ್ವಜನಿಕ ಸ್ವರೂಪದ ಸೇವೆ ಅಥವಾ ಧರ್ಮಾರ್ಥವಾಗಿರುವಂಥ ಯಾವುದೇ ಸೇವೆ ಅಥವಾ ಧರ್ಮಕಾರ್ಯವನ್ನು ಆಚರಿಸಲು ಯಾರೇ ವ್ಯಕ್ತಿಗೆ ನೀಡಲಾದಂಥ ಯಾವುದೇ ನಗದು ಅನುದಾನಕ್ಕೆ ಅನ್ವಯಿಸತಕ್ಕದ್ದಲ್ಲ:

ಪರಂತು, ಈ ಉಪ ಪ್ರಕರಣದಲ್ಲಿ ನಮೂದಿಸಲಾದ ನಗದು ಅನುದಾನವನ್ನು ಸಂಸ್ಥೆಯು ಅಸ್ತಿತ್ವದಲ್ಲಿ ಇರುವವರೆಗೆ ಮಾತ್ರ ಸಂಬಂಧಿಸಿದ ಸಂಸ್ಥೆ ಅಥವಾ ವ್ಯಕ್ತಿಗೆ ಸಂದಾಯ ಮಾಡತಕ್ಕದ್ದು.

(3) ಹೈದರಾಬಾದ್ ಪ್ರದೇಶದಲ್ಲಿ ಜಾರಿಯಲ್ಲಿರುವ, ಹೈದರಾಬಾದ್ ಅತಿಯಾತ್ ವಿಚಾರಣೆಗಳ ಅಧಿನಿಯಮ, 1952 (1952ರ ಹೈದರಾಬಾದ್ ಅಧಿನಿಯಮ-X ) ರ 5ನೇ ಪ್ರಕರಣದ ಉಪಬಂಧಗಳು, ಆ ಅಧಿನಿಯಮದ ಮೇರೆಗೆ ಅತಿಯಾತ್ ಅನುದಾನಗಳನ್ನು ಅನ್ವಯಿಸುವಂತೆಯೇ ಈ ಅಧಿನಿಯಮದ ಮೂಲಕ ಮುಂದುವರೆಸಲಾದ ನಗದು ಅನುದಾನಗಳಿಗೂ ಅನ್ವಯವಾಗತಕ್ಕದ್ದೆಂದು ಸಂದೇಹಗಳ ನಿವಾರಣೆಗಾಗಿ ಈ ಮೂಲಕ ಘೋಷಿಸಲಾಗಿದೆ.

(4) ಸರ್ಕಾರವು, ರಾಜ ಪತ್ರದಲ್ಲಿ ಅಧಿಸೂಚನೆಯನ್ನು ಪ್ರಕಟಿಸುವ ಮೂಲಕ, ಅನುಸೂಚಿಯಲ್ಲಿರುವ ಯಾವುದೇ ನಮೂದುಗಳನ್ನು ಬದಲಾಯಿಸಬಹುದು, ಅವುಗಳಿಗೆ ಸೇರಿಸಬಹುದು ಅಥವಾ ಅವುಗಳಲ್ಲಿ ಯಾವುದನ್ನಾದರು ಬಿಟ್ಟುಬಿಡಬಹುದು.

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ 1-11-1973ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

**4. ಕೆಲವು ಅನುದಾನಗಳ ರದ್ದಿಯಾತಿ ಮತ್ತು ಆ ಬಗೆಗಿನ ನಷ್ಟ ಪರಿಹಾರದ ಸಂದಾಯ:–** (1) ಯಾವುದೇ ಕಾನೂನು, ರೂಢಿ, ಆಚರಣೆ, ಸನ್ನದು ಅಥವಾ ನ್ಯಾಯಾಲಯದ ಅಥವಾ ಇತರ ಪ್ರಾಧಿಕಾರದ ಡಿಕ್ರಿ ಅಥವಾ ಆದೇಶದಲ್ಲಿ ಏನೇ ಒಳಗೊಂಡಿದ್ದರೂ, ಮತ್ತು (2)ನೇ ಉಪ ಪ್ರಕರಣದ ಉಪಬಂಧಗಳಿಗೊಳಪಟ್ಟು,-

(ಎ) 1952ರ ಜುಲೈ 30ನೇ ದಿನಾಂಕದಿಂದ ಜಾರಿಯಲ್ಲಿ ಬರುವಂತೆ ಅನುಸೂಚಿಯ ಭಾಗ ಎ ಯಲ್ಲಿ ನಿರ್ದಿಷ್ಟಪಡಿಸಿದ ನಗದು ಅನುದಾನಗಳ ಸಂದರ್ಭದಲ್ಲಿ ; ಮತ್ತು

(ಬಿ) 1954ರ ಜುಲೈ 1ನೇ ದಿನಾಂಕದಿಂದ ಜಾರಿಯಲ್ಲಿ ಬರುವಂತೆ ಅನುಸೂಚಿಯ ಭಾಗ ಬಿ ಮತ್ತು ಭಾಗ ಸಿ ನಲ್ಲಿ ನಿರ್ದಿಷ್ಟಪಡಿಸಿದ ನಗದು ಅನುದಾನಗಳ ಸಂದರ್ಭದಲ್ಲಿ

-1952ರ ಏಪ್ರಿಲ್ 1ನೇ ದಿನಾಂಕದಿಂದ ಪ್ರಾರಂಭವಾಗುವ ವರ್ಷದ ಅವಧಿಯಲ್ಲಿ ಸಂದಾಯಮಾಡಬೇಕಾಗಿದ್ದು ಅಥವಾ ಜಾರಿಗೊಳಿಸಬೇಕಾಗಿದ್ದು, ಅನುಸೂಚಿಯ ಭಾಗ-I ರಲ್ಲಿ ನಿರ್ದಿಷ್ಟಪಡಿಸಲಾದ ಎಲ್ಲ ನಗದು ಅನುದಾನಗಳು ಮತ್ತು 1954ರ ಏಪ್ರಿಲ್ 1ನೇ ದಿನಾಂಕದಿಂದ ಪ್ರಾರಂಭವಾಗುವ ವರ್ಷದ ಅವಧಿಯಲ್ಲಿ ಅಥವಾ ಆ ತರುವಾಯದ ಯಾವುದೇ ವರ್ಷದಲ್ಲಿ ಸಂದಾಯ ಮಾಡಬೇಕಾಗಿದ್ದು ಅಥವಾ ಜಾರಿಗೊಳಿಸಬೇಕಾಗಿದ್ದು, ಅನುಸೂಚಿಯ ಭಾಗ ಬಿ ಮತ್ತು ಭಾಗ ಸಿ ಯಲ್ಲಿ ನಿರ್ದಿಷ್ಟಪಡಿಸಲಾದ ಎಲ್ಲ ನಗದು ಅನುದಾನಗಳು ಮುಂದುವರೆಯತಕ್ಕದ್ದಲ್ಲ ಅಥವಾ ಜಾರಿಯಲ್ಲಿರುವುದು ನಿಂತು ಹೋಗತಕ್ಕದ್ದು.

(2) (1)ನೇ ಉಪ ಪ್ರಕರಣದ ಮೇರೆಗೆ ನಗದು ಅನುದಾನದ ಅನುದಾನಿತನಿಗೆ ಈ ಮುಂದಿನಂತೆ ನಷ್ಟ ಪರಿಹಾರವನ್ನು ಸಂದಾಯ ಮಾಡತಕ್ಕದ್ದು:–

(i) ಅನುಸೂಚಿಯ ಭಾಗ ಎ ನಲ್ಲಿ ನಿರ್ದಿಷ್ಟಪಡಿಸಿದ ನಗದು ಅನುದಾನದ ಸಂದರ್ಭದಲ್ಲಿ, ಅನುದಾನಿತನಿಗೆ ಸಂದಾಯ ಮಾಡಬೇಕಾದ ವಾರ್ಷಿಕ ಮೊಬಲಿಗಿನ ನಾಲ್ಕು ಪಟ್ಟಿಗೆ ಸಮನಾದ ಮೊತ್ತ;

(ii) ಅನುಸೂಚಿಯ ಭಾಗ ಬಿ ನಲ್ಲಿ ನಿರ್ದಿಷ್ಟಪಡಿಸಿದ ನಗದು ಅನುದಾನದ ಸಂದರ್ಭದಲ್ಲಿ , ಅನುದಾನಿತನಿಗೆ ಸಂದಾಯ ಮಾಡಬೇಕಾದ ವಾರ್ಷಿಕ ಮೊಬಲಗಿನ ಆರು ಪಟ್ಟಿಗೆ ಸಮನಾದ ಮೊತ್ತ; ಮತ್ತು

(iii) ಅನುಸೂಚಿಯ ಭಾಗ ಸಿ ನಲ್ಲಿ ನಿರ್ದಿಷ್ಟ ಪಡಿಸಿದ ನಗದು ಅನುದಾನದ ಸಂದರ್ಭದಲ್ಲಿ, ಅನುದಾನಿತನಿಗೆ ಸಂದಾಯ ಮಾಡಬೇಕಾದ ವಾರ್ಷಿಕ ಮೊಬಲಗಿನ ನಾಲ್ಕು ಪಟ್ಟಿಗೆ ಸಮನಾದ ಮೊತ್ತ:

ಪರಂತು, ಈ ಕೆಳಗಿನ ಕೋಷ್ಟಕದ (1)ನೇ ಅಂಕಣದಲ್ಲಿ ನಿರ್ದಿಷ್ಟ ಪಡಿಸಿದ ಸಂದರ್ಭಗಳ ಪೈಕಿ ಪ್ರತಿಯೊಂದು ಸಂದರ್ಭದಲ್ಲಿ, ಭಾಗ ಸಿ ನಲ್ಲಿ ನಿರ್ದಿಷ್ಟಪಡಿಸಿದ ನಗದು ಅನುದಾನವನ್ನು, (2)ನೇ ಅಂಕಣದಲ್ಲಿ ನಮೂದಿಸಲಾದ ಅವಧಿಯಲ್ಲಿ, ಪ್ರತಿಯೊಂದು ಸಂದರ್ಭದಲ್ಲಿ ನಿರ್ದಿಷ್ಟಪಡಿಸಿದ ಷರತ್ತುಗಳಿಗೊಳಪಟ್ಟು ಮುಂದುವರಿಸತಕ್ಕದ್ದು, ಎಂದರೆ:-

**ಕೋಷ್ಟಕ**

| (1) | (2) |
|---|---|
| (1) ಅನುದಾನಿತನು ಪುರುಷನಾಗಿರಲಿ ಅಥವಾ ಮಹಿಳೆಯಾಗಿರಲಿ 1954ರ ಏಪ್ರಿಲ್ 1ರಂದು ಅವರ ವಯಸ್ಸು 60 ವರ್ಷಗಳಿಗಿಂತ ಕಡಿಮೆ ಇಲ್ಲದಿದ್ದಲ್ಲಿ. | (2) ಅನುದಾನಿತನ ಮರಣದ ದಿನಾಂಕದವರೆಗೆ. |
| (2) ಅನುದಾನಿತನ ವಯಸ್ಸು 1954ರಲ್ಲಿ ಏಪ್ರಿಲ್ 1ನೇ ದಿನದಂದು 60 ವರ್ಷಗಳಿಗಿಂತ ಕಡಿಮೆ ಇದ್ದಲ್ಲಿ,- | |
| (i) ಪುರುಷ ಅಥವಾ ಅವಿವಾಹಿತ ಮಹಿಳೆಯ ಸಂದರ್ಭದಲ್ಲಿ, ಅನುದಾನಿತನು ಕುರುಡ, ಕಿವುಡ, ಮೂಕ, ಚಿತ್ತ ಭ್ರಮೆಗೊಳಗಾದವನು, ಹೆಳವ ಅಥವಾ ಪಾರ್ಶ್ವವಾಯು ಪೀಡಿತನಾಗಿದ್ದು ಜೀವನೋಪಾಯ ನಡೆಸಲು ಅಸಮರ್ಥನಾಗಿದ್ದರೆ; | ರದ್ದಾದ ದಿನಾಂಕದಿಂದ ಅನುದಾನಿತನ ಮರಣದ ದಿನಾಂಕದವರೆಗೆ. |
| (ii) ವಿಧವೆಯಾದಲ್ಲಿ. | ಅವಳು ವಿಧವೆಯಾಗಿ ಇರುವವರೆಗೆ. |
| (3) ಅನುದಾನಿತನು ಅಪ್ರಾಪ್ತ ವಯಸ್ಕನಾಗಿದ್ದಲ್ಲಿ,- | |
| (i) ಪುರುಷನ ಸಂದರ್ಭದಲ್ಲಿ, ಅಂಥ ನಗದು ಅನುದಾನವು ಅವನ ವರಮಾನದ ಏಕಮಾತ್ರ ಮೂಲವಾಗಿದ್ದರೆ; | ರದ್ದಾದ ದಿನಾಂಕದಿಂದ 18 ವರ್ಷಗಳು ತುಂಬುವ ದಿನಾಂಕದವರೆಗೆ. |
| (ii) ಮಹಿಳೆಯಾಗಿದ್ದಲ್ಲಿ. | ರದ್ದಾದ ದಿನಾಂಕದಿಂದ ವಿವಾಹವಾದ ದಿನಾಂಕದವರೆಗೆ ಅಥವಾ 18 ವರ್ಷಗಳು ತುಂಬುವ ದಿನಾಂಕದವರೆಗೆ ಇವುಗಳಲ್ಲಿ ಯಾವುದು ಮೊದಲೋ, ಆವರೆಗೆ. |

(3) 18 ವರ್ಷ ವಯಸ್ಸು ತುಂಬುವ ಮುಂಚೆ ಅಪ್ರಾಪ್ತ ವಯಸ್ಕ ಪುರುಷನು ಅಥವಾ ವಿವಾಹವಾಗುವ ಮುಂಚೆ ಅಪ್ರಾಪ್ತ ವಯಸ್ಕ ಮಹಿಳೆಯು ಸ್ವೀಕರಿಸುವ ನಗದು ಅನುದಾನದ ಮೊಬಲಗು, ನಗದು ಅನುದಾನದ ವಾರ್ಷಿಕ ಮೊಬಲಗು ನಾಲ್ಕು ಪಟ್ಟಿಗಿಂತ ಕಡಿಮೆ ಇದ್ದರೆ ಆಗ ಆ ಕೊರತೆಯನ್ನು ಪುರುಷ ಅಪ್ರಾಪ್ತ ವಯಸ್ಕನಿಗೆ 18 ವರ್ಷಗಳ ವಯಸ್ಸು ತುಂಬಿದಾಗ ಮತ್ತು ಮಹಿಳಾ ಅಪ್ರಾಪ್ತ ವಯಸ್ಸಿನವಳಿಗೆ 18 ವರ್ಷಗಳ ವಯಸ್ಸು ತುಂಬಿದಾಗ ಅಥವಾ ಅವಳು ವಿವಾಹವಾಗುವವರೆಗೆ, ಇವುಗಳಲ್ಲಿ ಯಾವುದು ಮೊದಲೋ ಆಗ ತುಂಬಿಕೊಡತಕ್ಕದ್ದು.

(4) ಈ ಅಧಿನಿಯಮವು ಅನ್ವಯಿಸುವ ನಗದು ಅನುದಾನವು ಯಾವುದೇ ಸೇವೆಯನ್ನು ಸಲ್ಲಿಸುವುದಕ್ಕೆ ಒಳಪಟ್ಟಿರುವಲ್ಲಿ, ಅನುದಾನ ಪಡೆದವನ ಅನುದಾನವನ್ನು ನಿಲ್ಲಿಸಲಾದ ದಿನಾಂಕದಿಂದ ಜಾರಿಯಲ್ಲಿ ಬರುವಂತೆ ಆ ಸೇವೆ ಸಲ್ಲಿಸುವ ಬದ್ಧತೆಯಿಂದ ಬಿಡುಗಡೆ ಹೊಂದಿರತಕ್ಕದ್ದು.

(5) ಅನುಸೂಚಿಯ ಭಾಗ ಎ ಮತ್ತು ಭಾಗ ಸಿ ಯಲ್ಲಿ ನಿರ್ದಿಷ್ಟಪಡಿಸಿದ ನಗದು ಅನುದಾನಗಳಿಗೆ ಸಂಬಂಧಿಸಿದಂತೆ, (2)ನೇ ಉಪ ಪ್ರಕರಣದ ಮೇರೆಗೆ ಸಂದಾಯ ಮಾಡಬೇಕಾದ ನಷ್ಟ ಪರಿಹಾರವನ್ನು, ನಿಯಮಿಸಬಹುದಾದ ರೀತಿಯಲ್ಲಿ ಮತ್ತು ಕಂತುಗಳಲ್ಲಿ ಅನುದಾನಿತನಿಗೆ ಸಂದಾಯ ಮಾಡತಕ್ಕದ್ದು; ಮತ್ತು ಅನುಸೂಚಿಯ ಭಾಗ ಬಿ ಯಲ್ಲಿ ನಿರ್ದಿಷ್ಟಪಡಿಸಿದ ನಗದು ಅನುದಾನಕ್ಕೆ ಸಂಬಂಧಿಸಿದಂತೆ ಸಂದಾಯ ಮಾಡಬೇಕಾದ ನಷ್ಟ ಪರಿಹಾರವನ್ನು ಪೂರ್ಣವಾಗಿಯಾಗಲಿ ಅಥವಾ ಹನ್ನೆರಡಕ್ಕೆ ಮೀರದ ವಾರ್ಷಿಕ ಕಂತುಗಳಲ್ಲಿಯಾಗಲಿ ಅವನಿಗೆ ಸಂದಾಯ ಮಾಡತಕ್ಕದ್ದು.

5. **ನಿಯಮಗಳ ರಚನಾಧಿಕಾರ:-** (1) ಸರ್ಕಾರವು ರಾಜಪತ್ರದಲ್ಲಿ ಅಧಿಸೂಚನೆಯನ್ನು ಪ್ರಕಟಿಸುವ ಮೂಲಕ ಈ ಅಧಿನಿಯಮದ ಎಲ್ಲ ಉದ್ದೇಶಗಳನ್ನು ಅಥವಾ ಯಾವುದೇ ಉದ್ದೇಶವನ್ನು ನೆರವೇರಿಸಲು ನಿಯಮಗಳನ್ನು ರಚಿಸಬಹುದು.

(2) ಈ ಪ್ರಕರಣದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಸಾಧ್ಯವಾದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಒಂದು ಅಧಿವೇಶನ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಹಾಗೆ ಮಂಡಿಸಲಾದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು, ಉಭಯ ಸದನಗಳು ಆ ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಬೇಕೆಂದು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಒಪ್ಪಿದರೆ, ಆ ತರುವಾಯ, ನಿಯಮವು ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರವೇ ಪರಿಣಾಮಕಾರಿಯಾಗತಕ್ಕದ್ದು; ಅಥವಾ ಸಂದರ್ಭಾನುಸಾರ, ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಡು ಅಥವಾ ರದ್ದಿಯಾತಿಯು ಆ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕೃತ್ಯದ ಸಿಂಧುತ್ವಕ್ಕೆ ಬಾಧಕ ಉಂಟು ಮಾಡತಕ್ಕದ್ದಲ್ಲ.

6. **ಇತ್ಯರ್ಥವಾಗದೆ ಇರುವ ವಿಷಯಗಳ ವಿಲೇವಾರಿ:-** ನಗದು ಅನುದಾನಗಳಿಗೆ ಸಂಬಂಧಿಸಿದಂತೆ, ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಯಾವುದೇ ಪ್ರಾಧಿಕಾರದ ಮುಂದೆ ಇತ್ಯರ್ಥವಾಗದೆ ಬಾಕಿಯಿದ್ದ ಎಲ್ಲ ಕ್ಲೇಮುಗಳು ಮತ್ತು ಎಲ್ಲ ವ್ಯವಹರಣೆಗಳನ್ನು, ಯಾವುದೇ ಕಾನೂನು, ಒಪ್ಪಂದ, ನ್ಯಾಯಾಲಯದ ತೀರ್ಮಾನ ಅಥವಾ ಆದೇಶದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ವ್ಯವಹರಿಸತಕ್ಕದ್ದು ಮತ್ತು ವಿಲೆಮಾಡತಕ್ಕದ್ದು.

7. **ನಿರಸನ:-** ಹೈದರಾಬಾದ್ (ನಗದು ಅನುದಾನಗಳ ರದ್ದಿಯಾತಿ) ಅಧಿನಿಯಮ, 1952 (1952ರ ಹೈದರಾಬಾದ್ ಅಧಿನಿಯಮ, XXXIII)ನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

**ಅನುಸೂಚಿ**

**(ಭಾಗ ಎ)**

(1) ಸರ್ದೇಶ್‌ಮುಖ್‌ರು,

(2) ಸರ್ದೇಶ್‌ಪಾಂಡ್ಯೆಗಳು,

(3) ದೇಶ್‌ಮುಖ್‌ರು,

(4) ದೇಶಪಾಂಡ್ಯೆಗಳು,

(5) ದಾಸ್ತಬಂದ್ರಾರು (ಮಿರಸಿ-ದಾಸ್ತ್ ಬಂದ್ರಾಗಳೂ ಸೇರಿದಂತೆ),

[1][(6) ಚೌಧರಿ,

(7) ಶೆಟ್ಟಿಗಿರಿ][1]

-ಇವರಿಗೆ ಸಂದಾಯ ಮಾಡಬೇಕಾದ ರುಸುಂಗಳು.

1. ಅಧಿಸೂಚನೆ ಸಂಖ್ಯೆ ಆರ್ ಡಿ 26 ಐ ಎನ್ ಎಂ 81 ದಿನಾಂಕ 9.2.1988 ರ ಮೂಲಕ ಸೇರಿಸಲಾಗಿದೆ. ಅಧಿಸೂಚನೆಯ ಪಾಠವು 7ನೇ ಪುಟದಲ್ಲಿದೆ.

(ಭಾಗ ಬಿ)

ಜಾಗೀರ್ ನಿವೃತ್ತಿ ವೇತನವೂ ಒಳಗೊಂಡಂತೆ ಮನ್ಸಾಬ್ ಮಾವಿಜ ಜಾಗೀರು,

ಮನ್ಸಾಬ್ ಮಾವಿಜ (ಕ್ವಾರ್ಜ),

ಮನ್ಸಾಬ್ ಮಾವಿಜ ಅರಸಿ ,

ಮನ್ಸಾಬ್ ಮಾವಿಜ ಅಬ್ಕಾರಿ,

ಮನ್ಸಾಬ್ ಮಾವಿಜ ಸೇರ್,

ಮನ್ಸಾಬ್ ಮಾವಿಜ ಆಸ್ಲ, ಕುತುಬ್, ದುಕಾನ್, ಸಫಾಯಿ,

ಮನ್ಸಬ್ ಇಮ್ತಿಯಾಸಿ,

ಮನ್ಸಬ್ ನಜಮ್ ಮಹವಾರ್‌ಗಳು,

ಜಾಗೀರ್‌ಗಳ ಬದಲಿಗೆ ನೀಡಿದ ಮಹಾವಾರತ್ ವಾಲಾಜಾಹಿ.

ಭಾಗ ಸಿ

ಸಾಮಾನ್ಯ ಮನ್ಸಬ್, ರೈಯೆತಿ, ಖಾಸ್ ಮತ್ತು ಮುತಾಫೆರಿಕಾ ಮುಹ್‌ವಾರ್ಸ್, ಮಾಶ್, ಯೋಮಿಯ, ಮಮೂಲ್, ಸಲಿಯಾನ್ಸ್, ಖಿಸ್ತೂಮ್ಸ್ ಮುಖಾಸಾಸ್ ಮತ್ತು ಅಗ್ರಹಾರ, ಮಾಹ್ ವಾರತ್ (ಜಾಗೀರ್ ಗಳ ಬದಲಿಗೆ ನೀಡಿದವುಗಳನ್ನು ಹೊರತುಪಡಿಸಿ) ತಹೀರ್ ಶಿರಸ್ತದಾರಿ, ವಿಖಾಯ್ ನಿಗಾರಿ.

**ಅಧಿಸೂಚನೆ**

**ಬೆಂಗಳೂರು ದಿನಾಂಕ 9ನೇ ಫೆಬ್ರವರಿ, 1988, [ಸಂ ಆರ್ ಡಿ 26**

**ಐಎನ್ ಎಂ 81]**

**ಎಸ್. ಓ. 654:–** ಕರ್ನಾಟಕ (ನಗದು ಅನುದಾನಗಳ ರದ್ದಿಯಾತಿ) ಅಧಿನಿಯಮ, 1967 (1967ರ ಕರ್ನಾಟಕ ಅಧಿನಿಯಮ 15) ಇದರ 3ನೇ ಪ್ರಕರಣದ (4) ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಸದರಿ ಅಧಿನಿಯಮದ ಅನುಸೂಚಿಯ (ಭಾಗ ಎ)ಗೆ ಈ ಮುಂದಿನ ತಿದ್ದುಪಡಿ ಮಾಡಿದೆ, ಎಂದರೆ:-

ಕರ್ನಾಟಕ (ನಗದು ಅನುದಾನಗಳ ರದ್ದಿಯಾತಿ) ಅಧಿನಿಯಮ, 1967 (1967ರ ಕರ್ನಾಟಕ ಅಧಿನಿಯಮ 15) ಇದರ ಅನುಸೂಚಿಯ (ಭಾಗ ಎ) ಯ (5)ನೇ ಬಾಬಿನ ತರುವಾಯ ಮುಂದಿನ ಬಾಬುಗಳನ್ನು ಸೇರಿಸತಕ್ಕದ್ದು, ಎಂದರೆ:-

"(6) ಚೌಧರಿ,

(7) ಶೆಟ್ಟಿಗಿರಿ",

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಕೆ.ನಾಗರತ್ನಮಣಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ.

(ದಿನಾಂಕ 28.4.1988ರ ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ -IV 2 ಸಿ (ii) ಸಂಖ್ಯೆ 278 ರಲ್ಲಿ ಪ್ರಕಟಿಸಲಾಗಿದೆ).

The above translation of the Karnataka (Abolition of Cash Grants) Act 1967 (Karnataka Act 15 of 1967) shall be authoritative text in the Kannada (Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 826

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 32 ರಾಶಾಪ್ರ 2005, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2006**

ಕರ್ನಾಟಕ ಸಂಸದೀಯ ಕಾರ್ಯದರ್ಶಿಗಳ ಭತ್ಯಗಳ ಅಧಿನಿಯಮ, 1963ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಸಂಸದೀಯ ಕಾರ್ಯದರ್ಶಿಗಳ ಭತ್ಯೆಗಳ ಅಧಿನಿಯಮ, 1963

### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**



### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**I**

**1963ರ ಅಧಿನಿಯಮ 15:-** ಸಂಸದೀಯ ಕಾರ್ಯದರ್ಶಿಗಳು ತಮ್ಮ ಕರ್ತವ್ಯಗಳನ್ನು ನಿರ್ವಹಿಸುವುದಕ್ಕೆ ಸಾಕಷ್ಟು ಸೌಲಭ್ಯಗಳನ್ನು ಒದಗಿಸಲು ಆ ಬಗ್ಗೆ ಕಾನೂನಿನ ರಚನೆ ಅಗತ್ಯವೆಂದು ಪರಿಗಣಿಸಲಾಗಿದೆ. ತದನುಸಾರವಾಗಿ, ಬೆಂಗಳೂರಿನಲ್ಲಿ ಉಚಿತ ಸುಸಜ್ಜಿತ ಗೃಹ ಅಥವಾ ಇದಕ್ಕೆ ಬದಲಾಗಿ ಪ್ರತಿ ತಿಂಗಳಿಗೆ 150 ರೂ. ಗಳ ಮನೆ ಬಾಡಿಗೆ ಭತ್ಯೆಯನ್ನು ನೀಡುವುದಕ್ಕಾಗಿ ಪ್ರಯಾಣಗಳು ಮತ್ತು ತಂಗುವಿಕೆಯ ಸಂಬಂಧದಲ್ಲಿ ಪ್ರಯಾಣ ಮತ್ತು ದಿನಭತ್ಯೆಗಳ ಸಂದಾಯಕ್ಕಾಗಿ ಮತ್ತು ಉಚಿತ ವೈದ್ಯಕೀಯ ನೆರವನ್ನು ಒದಗಿಸುವುದಕ್ಕಾಗಿ ವಿಧೇಯಕದಲ್ಲಿ ಉಪಬಂಧ ಕಲ್ಪಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ-IV 2 ಸಿ, ದಿನಾಂಕ 8 ನೇ ಏಪ್ರಿಲ್, 1963ರ ಸಂಖ್ಯೆ 59ರ ಪುಟಸಂಖ್ಯೆ 6 ರಲ್ಲಿ ಪ್ರಕಟಿಸಲಾಗಿದೆ.)

**II**

**1999 ರ ತಿದ್ದುಪಡಿ ಮಾಡುವ ಅಧಿನಿಯಮ 7:-** ಸಂಸದೀಯ ಕಾರ್ಯದರ್ಶಿಗಳ ಭತ್ಯೆಗಳ ಅಧಿನಿಯಮ, 1963 ರಲ್ಲಿ ಕಾರ್ಯದರ್ಶಿಯವರ ನೇಮಕಾತಿ, ಕರ್ತವ್ಯಗಳು ಮತ್ತು ಪ್ರಕಾರ್ಯಗಳು, ಪದದ ಪ್ರಮಾಣ ವಚನ ಮತ್ತು ಅವರಿಗೆ ಸಂದಾಯ ಮಾಡಬೇಕಾದ ವೇತನಕ್ಕೆ ಸಂಬಂಧಿಸಿದಂತೆ ಉಪಬಂಧಗಳು ಒಳಗೊಂಡಿಲ್ಲ.

ಆದ್ದರಿಂದ ಇದರ ಏರ್ಪಾಡಿಗಾಗಿ ಸದರಿ ಅಧಿನಿಯಮಕ್ಕೆ ಸೂಕ್ತ ತಿದ್ದುಪಡಿಗಳನ್ನು ತರುವುದು ಅಗತ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ-IV 2 ಎ, ದಿನಾಂಕ 31 ನೇ ಮಾರ್ಚ್, 1999ರ ಪುಟ 4 ರಲ್ಲಿ ಪ್ರಕಟಿಸಲಾಗಿದೆ.)

# 1963ರ [1][ಕರ್ನಾಟಕ ಅಧಿನಿಯಮು][1] ಸಂಖ್ಯೆ 15

(1963ರ ಏಪ್ರಿಲ್ 20 ನೇ ದಿನಾಂಕದಂದು [1][ಕರ್ನಾಟಕ[1] ರಾಜಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)

## [1][ಕರ್ನಾಟಕ][1] ಸಂಸದೀಯ ಕಾರ್ಯದರ್ಶಿಗಳ ಭತ್ಯೆಗಳ ಅಧಿನಿಯಮ, 1963

(1963ರ ಏಪ್ರಿಲ್ ಹತ್ತೊಂಬತ್ತನೇ ದಿನದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ.)

(1999ರ 7 ನೇ ಅಧಿನಿಯಮದ ಮೂಲಕ ತಿದ್ದುಪಡಿ ಮಾಡಲಾದಂತೆ.)

**ಸಂಸದೀಯ ಕಾರ್ಯದರ್ಶಿಗಳ [2][ವೇತನ, ಭತ್ಯೆಗಳು ಮತ್ತು ಇನ್ನಿತರ ಏರ್ಪಾಡು][2] ಗಳಿಗಾಗಿ ಉಪಬಂಧ ಕಲ್ಪಿಸುವ ಒಂದು ಅಧಿನಿಯಮ.**

[1][ಕರ್ನಾಟಕ ರಾಜ್ಯ][1] ದ ಸಂಸದೀಯ ಕಾರ್ಯದರ್ಶಿಗಳ [2][ವೇತನ, ಭತ್ಯೆಗಳು ಮತ್ತು ಇನ್ನಿತರ ಏರ್ಪಾಡು][2] ಗಳಿಗಾಗಿ ಉಪಬಂಧ ಕಲ್ಪಿಸುವುದು ವಿಹಿತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಹದಿನಾಲ್ಕನೇ ವರ್ಷದಲ್ಲಿ [1][ಕರ್ನಾಟಕ ರಾಜ್ಯ][1] ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಚಿಕ್ಕ ಹೆಸರು ಮತ್ತು ಪ್ರಾರಂಭ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ಸಂಸದೀಯ ಕಾರ್ಯದರ್ಶಿಗಳ [2][ವೇತನ, ಭತ್ಯೆಗಳು ಮತ್ತು ಇನ್ನಿತರ ಏರ್ಪಾಡುಗಳ][2] ಅಧಿನಿಯಮ, 1963 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) " ಸಂಸದೀಯ ಕಾರ್ಯದರ್ಶಿ" ಎಂದರೆ, [3][ಮುಖ್ಯ ಮಂತ್ರಿಯವರಿಂದ][3] ಸಂಸದೀಯ ಕಾರ್ಯದರ್ಶಿಯೆಂದು ನೇಮಿತನಾದ, [1][ಕರ್ನಾಟಕ ವಿಧಾನಸಭೆಯ][1] ಅಥವಾ [1][ಕರ್ನಾಟಕ ವಿಧಾನಪರಿಷತ್ತಿನ][1] ಸದಸ್ಯ;

(ಬಿ) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

[4][(ಸಿ) XXX.][4]

[5][**3. ಸಂಸದೀಯ ಕಾರ್ಯದರ್ಶಿಯ ವೇತನ ಮತ್ತು ಭತ್ಯೆಗಳು:-**ಸಂಸದೀಯ ಕಾರ್ಯದರ್ಶಿಯು, ಸರ್ಕಾರವು ಕಾಲಕಾಲಕ್ಕೆ ನಿಗದಿಪಡಿಸಬಹುದಾಂಥ ಕರ್ನಾಟಕ ಸಚಿವರ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956 ರ ಮೇರೆಗೆ, ಸಚಿವರು, ರಾಜ್ಯ ಸಚಿವರು ಅಥವಾ ಉಪ ಸಚಿವರಿಗೆ ಅಂಗೀಕಾರಾರ್ಹವಾದಂಥ ವೇತನಗಳು ಮತ್ತು ಭತ್ಯೆಗಳಿಗೆ ಹಕ್ಕುಳ್ಳವನಾಗಿರತಕ್ಕದ್ದು.

**4. ಸಂಸದೀಯ ಕಾರ್ಯದರ್ಶಿಯು ಸದಸ್ಯನಂತೆ ವೇತನ ಮತ್ತು ಭತ್ಯೆಗಳನ್ನು ಪಡೆಯದಿರುವುದು:-** ಸಂಸದೀಯ ಕಾರ್ಯದರ್ಶಿಯು, ತನ್ನ ಹುದ್ದೆಯ ವೇತನ ಮತ್ತು ಭತ್ಯೆಗಳನ್ನು ಪಡೆಯುವಾಗ, ವಿಧಾನಸಭಾ ಸದಸ್ಯ ಅಥವಾ ಸಂದರ್ಭಾನುಸಾರ ವಿಧಾನಪರಿಷತ್ತಿನ ಸದಸ್ಯನಂತೆ ಯಾವುದೇ ವೇತನ ಮತ್ತು ಭತ್ಯೆಗಳಿಗೆ ಹಕ್ಕುಳ್ಳವನಾಗಿರತಕ್ಕದ್ದಲ್ಲ.

**5. ಸಂಸದೀಯ ಕಾರ್ಯದರ್ಶಿಯ ಕರ್ತವ್ಯಗಳು ಮತ್ತು ಪ್ರಕಾರ್ಯಗಳು:-** ಸಂಸದೀಯ ಕಾರ್ಯದರ್ಶಿಯ ಕರ್ತವ್ಯಗಳು ಮತ್ತು ಪ್ರಕಾರ್ಯಗಳು, ಮುಖ್ಯಮಂತ್ರಿಯವರು ಅಥವಾ ಸಂಸದೀಯ ಖಾತೆಯ ಸಚಿವರು ನಿರ್ದಿಷ್ಟಪಡಿಸಬಹುದಾದಂತೆ ಇರತಕ್ಕದ್ದು.

**6. ಅಧಿಕಾರ ಪದದ ಮತ್ತು ರಹಸ್ಯಪಾಲನಾ ಪ್ರಮಾಣವಚನ:-** ಸಂಸದೀಯ ಕಾರ್ಯದರ್ಶಿಯು, ತನ್ನ ಹುದ್ದೆಗೆ ವರದಿ ಮಾಡಿಕೊಳ್ಳುವ ಮೊದಲು, ಈ ಸಂಬಂಧದಲ್ಲಿ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ನಮೂನೆಗನುಸಾರವಾಗಿ ಮುಖ್ಯಮಂತ್ರಿಯವರು ಅಧಿಕಾರ ಪದದ ಮತ್ತು ರಹಸ್ಯ ಪಾಲನಾ ಪ್ರಮಾಣ ವಚನವನ್ನು ಬೋಧಿಸತಕ್ಕದ್ದು.][5]

---

1. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ ದಿನಾಂಕ1-11-1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 1999ರ ಅಧಿನಿಯಮ ಸಂಖ್ಯೆ 7ರ ಮೂಲಕ 12-03-1999ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1999ರ ಅಧಿನಿಯಮ ಸಂಖ್ಯೆ 7ರ ಮೂಲಕ ದಿನಾಂಕ:12-03-1999 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
4. 1999ರ ಅಧಿನಿಯಮ ಸಂಖ್ಯೆ 7ರ ಮೂಲಕ ದಿನಾಂಕ 12.3.1999 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ.
5. 1999ರ ಅಧಿನಿಯಮ ಸಂಖ್ಯೆ 7ರ ಮೂಲಕ ದಿನಾಂಕ 12.03.1999 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

**7. ಸಂಸದೀಯ ಕಾರ್ಯದರ್ಶಿಯು ವೃತ್ತಿ ನಡೆಸದಿರುವುದು, ಇತ್ಯಾದಿ:–** ಸಂಸದೀಯ ಕಾರ್ಯದರ್ಶಿಯು, ತನ್ನ ಅಧಿಕಾರಾವಧಿಯಲ್ಲಿ ಯಾವುದೇ ವೃತ್ತಿ ನಡೆಸತಕ್ಕದ್ದಲ್ಲ ಅಥವಾ ಯಾವುದೇ ವ್ಯಾಪಾರದಲ್ಲಿ ತೊಡಗತಕ್ಕದ್ದಲ್ಲ ಅಥವಾ ಸಂಸದೀಯ ಕಾರ್ಯದರ್ಶಿಯಾಗಿ ಮಾಡಬೇಕಾದ ತನ್ನ ಕರ್ತವ್ಯಗಳನ್ನು ಹೊರತುಪಡಿಸಿ ಇತರ ಯಾವುದೇ ಉದ್ಯೋಗವನ್ನು ಸಂಭಾವನೆ ಪಡೆದು ಮಾಡತಕ್ಕದ್ದಲ್ಲ.

**8. ನಿಯಮ ರಚನಾಧಿಕಾರ:–** (1) ರಾಜ್ಯಸರ್ಕಾರವು, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ [1][ಕರ್ನಾಟಕ ರಾಜ][1] ಪತ್ರದಲ್ಲಿ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ಈ ಪ್ರಕರಣದ ಮೇರೆಗೆ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಒಂದಾದ ಮೇಲೊಂದರಂತೆ ಬರುವ ಎರಡು ಅಧಿವೇಶನಗಳಲ್ಲಿ ಅಡಕವಾಗಬಹುದಾದಂಥ ಒಟ್ಟು ಮೂವತ್ತು ದಿವಸಗಳ ಅವಧಿಯವರೆಗೆ ಅಧಿವೇಶನದಲ್ಲಿರುವಾಗ ಇಡತಕ್ಕದ್ದು ಮತ್ತು ಅದನ್ನು ಹಾಗೆ ಇಡಲಾದ ಅಧಿವೇಶನ ಅಥವಾ ನಿಕಟೋತ್ತರದ ಅಧಿವೇಶನವು ಮುಕ್ತಾಯವಾಗುವುದಕ್ಕೆ ಮುಂಚೆ, ಎರಡೂ ಸದನಗಳು ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಒಪ್ಪಿದರೆ ಅಥವಾ ಎರಡೂ ಸದನಗಳು ನಿಯಮವನ್ನು ರಚಿಸಬಾರದೆಂದು ಒಪ್ಪಿದರೆ, ಆ ತರುವಾಯ ಆ ನಿಯಮವು ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ; ಆದಾಗ್ಯೂ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮದ ಮೇರೆಗೆ ಹಿಂದೆ ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕವನ್ನುಂಟು ಮಾಡತಕ್ಕದ್ದಲ್ಲ.

---

6. ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶ, 1973ರ ಮೂಲಕ ದಿನಾಂಕ1-11-1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

The above translation of the Karnataka Parliamentary Secretaries Allowances Act, 1963 (Karnataka Act 15 of 1963) shall be authoritative text in the Kannada Language under section 5A of the Karnataka Official Language Act, 1963 (Karnataka Act 26 of 1963).

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಬೋರೇಗೌಡ**

ಸರ್ಕಾರದ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

ಪಿ.ಆರ್. 827

## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 84 ರಾಶಾಪ್ರ 2005, ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2006**

ಕರ್ನಾಟಕ ನಿಕ್ಷೇಪ ನಿಧಿ ಅಧಿನಿಯಮ, 1962ರ (1963ರ 23) ಮತ್ತು ಕರ್ನಾಟಕ ನಿಕ್ಷೇಪ ನಿಧಿ ನಿಯಮಗಳು 1963 ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5A ಅಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ನಿಕ್ಷೇಪ ನಿಧಿ ಅಧಿನಿಯಮ, 1962

### ಪ್ರಕರಣಗಳ ಅನುಕ್ರಮಣಿಕೆ

ಪ್ರಕರಣಗಳು:

18. ನೋಟೀಸು ಕೊಡಲು ತಪ್ಪುವುದು, ಇತ್ಯಾದಿಗಳಿಗಾಗಿ ನಿಕ್ಷೇಪವನ್ನು ಕಂಡವನಿಗೆ ದಂಡ ವಿಧಿಸುವುದು
19. 18ನೇ ಪ್ರಕರಣದ ಮೇರೆಗೆ ಅಪರಾಧಗಳನ್ನು ಎಸಗಲು ದುಷ್ಪ್ರೇರಿಸುವ ಒಡೆಯನಿಗೆ ದಂಡ ವಿಧಿಸುವುದು
20. ನಿಯಮ ರಚನಾಧಿಕಾರ
21. ನಿರಸನ ಮತ್ತು ಉಳಿಸುವಿಕೆಗಳು

## ಉದ್ದೇಶ ಮತ್ತು ಕಾರಣಗಳ ಹೇಳಿಕೆ

## I

**1963ರ ಅಧಿನಿಯಮ 23:-** ಹೊಸ ಮೈಸೂರು ರಾಜ್ಯದ ವಿವಿಧ ಪ್ರದೇಶಗಳಲ್ಲಿ ನಿಕ್ಷೇಪ ನಿಧಿಗೆ ಸಂಬಂಧಿಸಿದಂತೆ ವಿವಿಧ ಕಾನೂನುಗಳು ಜಾರಿಯಲ್ಲಿವೆ. ಮುಂಬಯಿ ಪ್ರದೇಶ, ಮದರಾಸು ಪ್ರದೇಶ ಮತ್ತು ಕೊಡಗು ಜಿಲ್ಲೆ-ಇವುಗಳಲ್ಲಿ ಭಾರತ ನಿಕ್ಷೇಪ ನಿಧಿ ಅಧಿನಿಯಮ, 1878 (1878ರ ಕೇಂದ್ರ ಅಧಿನಿಯಮ VI) ಜಾರಿಯಲ್ಲಿದೆ. ಮೈಸೂರು ಪ್ರದೇಶ ಮತ್ತು ಹೈದರಾಬಾದ್ ಪ್ರದೇಶ ಇವುಗಳಲ್ಲಿ, ಮೈಸೂರು ನಿಕ್ಷೇಪ ನಿಧಿ ಅಧಿನಿಯಮ, 1910 ಮತ್ತು ಹೈದರಾಬಾದ್ ನಿಕ್ಷೇಪ ನಿಧಿ ಅಧಿನಿಯಮ, 1322 ಫಸಲಿ (ಹೈದರಾಬಾದ್ ಅಧಿನಿಯಮ 1322 ಫಸಲಿಯ III) ಅನುಕ್ರಮವಾಗಿ ಜಾರಿಯಲ್ಲಿವೆ. ಹೊಸ ರಾಜ್ಯದಾದ್ಯಂತ ಅನ್ವಯಿಸುವ ಏಕರೂಪದ ಕಾನೂನು ಇರುವುದು ಅಪೇಕ್ಷಣೀಯವೆಂದು ಪರಿಗಣಿಸಲಾಗಿದೆ. ಆದ್ದರಿಂದ ಈ ವಿಧೇಯಕ.

**ಈ ವಿಧೇಯಕದ ಪ್ರಮುಖ ಉಪಬಂಧಗಳು ಈ ಮುಂದಿನಂತಿವೆ:-** ಮಣ್ಣಿನಲ್ಲಿ ಹುದುಗಿರುವ ಅಥವಾ ಭೂಮಿಗೆ ಹೊಂದಿಕೊಂಡಿರುವ ಯಾವುದರಲ್ಲಿಯೇ ಆಗಲಿ, ಹುದುಗಿರುವ ಹತ್ತು ರೂಪಾಯಿ ಮೊತ್ತ ಅಥವಾ ಮೌಲ್ಯವನ್ನು ಮೀರಿದ ಯಾವುದೇ ನಿಕ್ಷೇಪವು ಕಂಡುಬಂದಲ್ಲಿ, ಅದನ್ನು ಕಂಡ ವ್ಯಕ್ತಿ ಮತ್ತು ನಿಕ್ಷೇಪ ಕಂಡುಬಂದ ಸ್ಥಳದ ಮಾಲೀಕ ಹಾಗೂ ಅಧಿಭೋಗದಾರನು ನಿಕ್ಷೇಪವು ಕಂಡುಬಂದ ಬಗ್ಗೆ ಡೆಪ್ಯೂಟಿ ಕಮಿಷನರನಿಗೆ ತಿಳಿಸತಕ್ಕದ್ದು. ಡೆಪ್ಯೂಟಿ ಕಮಿಷನರನು ಅದರ ವಿವರಗಳನ್ನು ಸರ್ಕಾರಕ್ಕೆ, ಪುರಾತತ್ವ ಇಲಾಖೆಯ ನಿರ್ದೇಶಕರಿಗೆ ಮತ್ತು ನಿಯಮಿಸಲಾದ ಅಧಿಕಾರಿಗೆ ವರದಿ ಮಾಡತಕ್ಕದ್ದು ಮತ್ತು ಆ ವಿವರಗಳನ್ನು ಅಧಿಸೂಚನೆಯಲ್ಲಿ ಪ್ರಕಟಿಸಿ ನಿಕ್ಷೇಪದಲ್ಲಿ ಆಸಕ್ತಿಯಿರುವ ವ್ಯಕ್ತಿಗಳು ವಿಚಾರಣೆಗೆ ಹಾಜರಾಗುವಂತೆ ತಿಳಿಸತಕ್ಕದ್ದು. ಯಾರೇ ವ್ಯಕ್ತಿಯು, ಒಂದು ನೂರು ವರ್ಷಗಳೊಳಗೆ ಅದನ್ನು ಹುದುಗಿಸಿಟ್ಟಿದ್ದನೇ ಹೇಗೆ ಎಂಬ ಬಗ್ಗೆ ಡೆಪ್ಯೂಟಿ ಕಮಿಷನರನು ನಿರ್ಧರಿಸುತ್ತಾನೆ ಮತ್ತು ಯಾರೇ ವ್ಯಕ್ತಿ ಆ ನಿಕ್ಷೇಪವು ತನ್ನದೆಂದು ಹೇಳಿದರೆ ಮತ್ತು ಅಂಥ ವ್ಯಕ್ತಿಯು ಸಿವಿಲ್ ನ್ಯಾಯಾಲಯದಲ್ಲಿ ಹೂಡಿದ ದಾವೆಯ ಮೂಲಕ ತನ್ನ ಹಕ್ಕನ್ನು ಸ್ಥಾಪಿಸಿದಲ್ಲಿ ಆ ನಿಕ್ಷೇಪವನ್ನು ಆ ವ್ಯಕ್ತಿಗೆ ನೀಡಲಾಗುವುದು. ಆದರೆ, ಆ ನಿಕ್ಷೇಪವು ಕಂಡುಬರುವುದಕ್ಕೆ ಮುಂಚೆ ನೂರು ವರ್ಷಗಳಿಗೂ ಹಿಂದೆ ಅದನ್ನು ಹುದುಗಿಸಿಡಲಾಗಿತ್ತೆಂದು ಡೆಪ್ಯೂಟಿ ಕಮಿಷನರನಿಗೆ ಕಂಡುಬಂದರೆ ಅಥವಾ ಮೇಲೆ ಹೇಳಲಾದಂತೆ ದಾವೆಯನ್ನು ಹೂಡಿಲ್ಲದಿದ್ದರೆ ಅಥವಾ ಅಂಥ ದಾವೆಯನ್ನು ವಜಾ ಮಾಡಿದ್ದರೆ, ಡೆಪ್ಯೂಟಿ ಕಮಿಷನರನು, ಆ ನಿಕ್ಷೇಪವನ್ನು ಒಡೆಯನಿಲ್ಲದ ನಿಕ್ಷೇಪವೆಂದು ಘೋಷಿಸಬಹುದು. ಅಂಥ ಘೋಷಣೆಯನ್ನು ಮಾಡಿದಾಗ, ಯಾರೇ ವ್ಯಕ್ತಿಯು ತಾನು ನಿಕ್ಷೇಪವು ಕಂಡುಬಂದ ಸ್ಥಳದ ಒಡೆಯನೆಂದು ಅದನ್ನು ಕ್ಲೇಮು ಮಾಡದಿದ್ದಲ್ಲಿ, ಆ ನಿಕ್ಷೇಪವನ್ನು ಕಂಡವನಿಗೆ ನೀಡತಕ್ಕದ್ದು. ಯಾರೇ ವ್ಯಕ್ತಿಯು, ಆ ಸ್ಥಳದ ಒಡೆಯನೆಂದು ಕ್ಲೇಮು ಮಾಡಿದರೆ, ಕಂಡವನು ಮತ್ತು ಆ ಸ್ಥಳದ ಒಡೆಯನ ನಡುವೆ ಸಮಭಾಗವಾಗಿ ಹಂಚತಕ್ಕದ್ದು ಮತ್ತು ಪಕ್ಷಕಾರರು ಹಂಚಿಕೆಗಾಗಿ ಇತರ ಯಾವುದೇ ವಿಧಾನವನ್ನು ಕುರಿತ ಒಪ್ಪಂದ ಮಾಡಿಕೊಂಡಿದ್ದ ಹೊರತು, ಕಂಡವನು ಒಂದು ಲಕ್ಷ ರೂ.ಗಳನ್ನು ಮೀರಿದ ಮೊಬಲಗಿಗೆ ಹಕ್ಕುದಾರನಾಗತಕ್ಕದ್ದಲ್ಲ. ರಾಜ್ಯ ಸರ್ಕಾರವು ಆ ನಿಧಿಯ ಮೌಲ್ಯವನ್ನು ಸಂದಾಯ ಮಾಡುವುದರ ಜೊತೆಗೆ ಆ ಮೌಲ್ಯದ $^{1}/_{5}$ ಭಾಗವೂ ಸೇರಿ ಆ ನಿಧಿಯನ್ನು ಸ್ವಾಧೀನಪಡಿಸಿಕೊಳ್ಳಬಹುದು.

ಈ ವಿಧೇಯಕದ ಉಪಬಂಧಗಳನ್ನು ಉಲ್ಲಂಘಿಸಿದ ವ್ಯಕ್ತಿಗಳು, ಅಪರಾಧ ನಿರ್ಣಯವಾದ ಮೇಲೆ ದಂಡನೆಗೆ ಗುರಿಯಾಗತಕ್ಕದ್ದು.

(ಕರ್ನಾಟಕ ರಾಜಪತ್ರ (ವಿಶೇಷ ಸಂಚಿಕೆ) ಭಾಗ IV- 2ಎ, ದಿನಾಂಕ 21ನೇ ಜೂನ್, 1962 ಪುಟಸಂಖ್ಯೆ 284 ರಲ್ಲಿ ಪ್ರಕಟಿತವಾಗಿದೆ.)

## 1963ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ 23

**(1963ರ ಜೂನ್ ಇಪ್ಪತ್ತೇಳನೇ ದಿನದಂದು [1][ಕರ್ನಾಟಕ ರಾಜಪತ್ರ][1] ದಲ್ಲಿ ಮೊದಲು ಪ್ರಕಟವಾಗಿದೆ.)**

# [1][ಕರ್ನಾಟಕ][1] ನಿಕ್ಷೇಪ ನಿಧಿ ಅಧಿನಿಯಮ, 1962

(1963ರ ಫೆಬ್ರವರಿ ಇಪ್ಪತ್ತೊಂದನೆಯ ದಿನದಂದು ರಾಷ್ಟ್ರಪತಿಯವರ ಅನುಮತಿಯನ್ನು ಪಡೆದಿದೆ.)

**[1][ಕರ್ನಾಟಕ ರಾಜ್ಯ][1]ದಲ್ಲಿ ನಿಕ್ಷೇಪ ನಿಧಿಗೆ ಸಂಬಂಧಿಸಿದ ಕಾನೂನನ್ನು ಕ್ರೋಡೀಕರಿಸುವ ಮತ್ತು ತಿದ್ದುಪಡಿ ಮಾಡುವ ಅಧಿನಿಯಮ.**

[1][ಕರ್ನಾಟಕ ರಾಜ್ಯ][1] ದಲ್ಲಿ ನಿಕ್ಷೇಪ ನಿಧಿಗೆ ಸಂಬಂಧಿಸಿದ ಕಾನೂನನ್ನು ಕ್ರೋಡೀಕರಿಸುವುದು ಮತ್ತು ತಿದ್ದುಪಡಿ ಮಾಡುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹದಿಮೂರನೆಯ ವರ್ಷದಲ್ಲಿ [1][ಕರ್ನಾಟಕ][1] ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗತಕ್ಕದ್ದು:-

## ಅಧ್ಯಾಯ - I

### ಪ್ರಾರಂಭಿಕ

**1. ಚಿಕ್ಕ ಹೆಸರು ಮತ್ತು ವ್ಯಾಪ್ತಿ:-** (1) ಈ ಅಧಿನಿಯಮವನ್ನು [1][ಕರ್ನಾಟಕ][1] ನಿಕ್ಷೇಪನಿಧಿ ಅಧಿನಿಯಮ, 1962 ಎಂದು ಕರೆಯತಕ್ಕದ್ದು.

(2) ಇದು ಇಡೀ [1][ಕರ್ನಾಟಕ ರಾಜ್ಯ][1] ಕ್ಕೆ ವ್ಯಾಪ್ತವಾಗುತ್ತದೆ.

**2. ಪರಿಭಾಷೆಗಳು:-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ಡೆಪ್ಯೂಟಿ ಕಮಿಷನರ್" ಎಂದರೆ, ಈ ಅಧಿನಿಯಮದ ಮೇರೆಗೆ ಡೆಪ್ಯೂಟಿ ಕಮಿಷನರ್‌ನ ಪ್ರಕಾರ್ಯಗಳನ್ನು ನಿರ್ವಹಿಸಲು ರಾಜ್ಯ ಸರ್ಕಾರವು ಅಧಿಸೂಚನೆ ಮೂಲಕ ನೇಮಕ ಮಾಡಬಹುದಾದಂಥ ಅಧಿಕಾರಿ ಮತ್ತು ಅಂಥ ಅಧಿಕಾರಿಯನ್ನು ನೇಮಕ ಮಾಡಿಲ್ಲದಿದ್ದರೆ, ಆ ಜಿಲ್ಲೆಯ ಜಿಲ್ಲಾಧಿಕಾರಿ;

(ಬಿ) "ನಿರ್ದೇಶಕ" ಎಂದರೆ, [1][ಕರ್ನಾಟಕದ ಪುರಾತತ್ವ ಶಾಸ್ತ್ರದ ಇಲಾಖೆಯ ನಿರ್ದೇಶಕ][1] ಮತ್ತು ಅದು ನಿರ್ದೇಶಕನ ಕರ್ತವ್ಯಗಳನ್ನು ನೆರವೇರಿಸಲು ರಾಜ್ಯ ಸರ್ಕಾರವು ಅಧಿಕೃತಗೊಳಿಸಿದ ಯಾರೇ ಅಧಿಕಾರಿಯನ್ನು ಒಳಗೊಳ್ಳುತ್ತದೆ;

(ಸಿ) "ಕಂಡವನು" ಎಂದರೆ, ಯಾರೇ ವ್ಯಕ್ತಿಯ ವ್ಯಕ್ತ ಅಥವಾ ಇಂಗಿತ ನಿರ್ದೇಶನದಲ್ಲಿ ಕೆಲಸ ಮಾಡುತ್ತಿರುವಾಗ ಯಾವುದೇ ನಿಕ್ಷೇಪವು ಕಂಡುಬಂದ ಸಂದರ್ಭದಲ್ಲಿ, ಅಂಥ ವ್ಯಕ್ತಿ ಮತ್ತು ಇತರ ಯಾವುದೇ ಸಂದರ್ಭದಲ್ಲಿ ನಿಕ್ಷೇಪವನ್ನು ಕಂಡ ವ್ಯಕ್ತಿ ;

(ಡಿ) "ಅಧಿಸೂಚನೆ" ಎಂದರೆ, ರಾಜಪತ್ರದಲ್ಲಿ ಪ್ರಕಟವಾದ ಅಧಿಸೂಚನೆ;

(ಇ) "ಒಡೆಯ" ಎಂಬುದು, ಯಾವುದೇ ಭೂಮಿಯ ಅಥವಾ ಭೂಮಿಗೆ ಲಗತ್ತಾದ ವಸ್ತುವಿನ ಸಂಬಂಧದಲ್ಲಿ ಯಾವುದೇ ಕಾನೂನು ಅಥವಾ ಲಿಖಿತದ ಮೇರೆಗೆ ಅಂಥ ಭೂಮಿ ಅಥವಾ ವಸ್ತುವಿನಲ್ಲಿರುವ ನಿಧಿಗೆ ಹಕ್ಕು ಹೊಂದಿರುವ ವ್ಯಕ್ತಿಯನ್ನು ಒಳಗೊಳ್ಳುತ್ತದೆ :

ಪರಂತು, ಆ ಭೂಮಿಯು ಸರ್ಕಾರದ ಸ್ವತ್ತಾಗಿದ್ದರೆ, ಸರ್ಕಾರವು ಆ ಭೂಮಿಯ ಅಥವಾ ಅದಕ್ಕೆ ಲಗತ್ತಾದ ವಸ್ತುವಿನ ಒಡೆಯ ಎಂಬುದಾಗಿ ಭಾವಿಸತಕ್ಕದ್ದು;

(ಎಫ್) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ನಿಯಮಗಳ ಮೂಲಕ ನಿಯಮಿಸಲಾದುದು;

(ಜಿ) "ನಿಕ್ಷೇಪ" ಎಂದರೆ, ಮಣ್ಣಿನಲ್ಲಿ ಅಥವಾ ಅದಕ್ಕೆ ಲಗತ್ತಾದ ಯಾವುದೇ ವಸ್ತುವಿನಲ್ಲಿ ಹುದುಗಿಸಿಟ್ಟ ಯಾವುದೇ ಮೌಲ್ಯದ ಯಾವುದೇ ವಸ್ತು.

## ಅಧ್ಯಾಯ- II

### ನಿಕ್ಷೇಪದ ಬಗ್ಗೆ ನೋಟೀಸು, ವಿಚಾರಣೆ ಮತ್ತು ಘೋಷಣೆ

**3. ನಿಕ್ಷೇಪ ಕಂಡುಬಂದ ಬಗ್ಗೆ ಡೆಪ್ಯೂಟಿ ಕಮಿಷನರನಿಗೆ ನೋಟೀಸು:-** (1) ಹತ್ತು ರೂಪಾಯಿ ಮೊಬಲಗು ಅಥವಾ ಮೌಲ್ಯವನ್ನು ಮೀರಿದ ಯಾವುದೇ ನಿಕ್ಷೇಪ ಕಂಡುಬಂದಾಗ, ಕಂಡವನು ಡೆಪ್ಯೂಟಿ ಕಮಿಷನರನಿಗೆ ಈ ಮುಂದಿನವುಗಳ ಬಗ್ಗೆ ಆ ಕೂಡಲೇ ಲಿಖಿತ ನೋಟೀಸು ಕೊಡತಕ್ಕದ್ದು,-

(ಎ) ಅಂಥ ನಿಕ್ಷೇಪದ ಸ್ವರೂಪ ಮತ್ತು ಮೊಬಲಗು ಅಥವಾ ಅಂದಾಜು ಮೌಲ್ಯ;

(ಬಿ) ಅದು ಕಂಡುಬಂದ ಸ್ಥಳ ಮತ್ತು ಕಂಡುಬಂದ ಸಂದರ್ಭ; ಮತ್ತು

(ಸಿ) ಅದು ಕಂಡುಬಂದ ದಿನಾಂಕ;

ಮತ್ತು ಅವನು, ನಿಕ್ಷೇಪವನ್ನು ಅತ್ಯಂತ ಹತ್ತಿರದಲ್ಲಿರುವ ಸರ್ಕಾರಿ ಖಜಾನೆಯಲ್ಲಿ ಇಡತಕ್ಕದ್ದು ಅಥವಾ ಡೆಪ್ಯೂಟಿ ಕಮಿಷನರನು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂಥ ಕಾಲ ಮತ್ತು ಸ್ಥಳದಲ್ಲಿ ಅದನ್ನು ಹಾಜರುಪಡಿಸಲು, ಡೆಪ್ಯೂಟಿ ಕಮಿಷನರನು ಯುಕ್ತವೆಂದು ಭಾವಿಸುವಂಥ ಭದ್ರತೆಯನ್ನು ಜಿಲ್ಲಾಧಿಕಾರಿಗೆ ಒದಗಿಸತಕ್ಕದ್ದು.

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆಗಳ ಆದೇಶದ ಮೂಲಕ ದಿನಾಂಕ 01.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(2) ನಿಕ್ಷೇಪವು ಕಂಡುಬಂದ ಸ್ಥಳದ ಮಾಲೀಕನು, ತಾನೇ ಕಂಡವನಲ್ಲದಿದ್ದರೆ ಮತ್ತು ಅಂಥ ಸ್ಥಳದ ಅಧಿಭೋಗದಾರನು, ಅವನು ಕಂಡವನಾಗಲಿ ಅಥವಾ ಮಾಲೀಕನಾಗಲೀ ಆಗಿಲ್ಲದಿರುವಾಗ, ಸಂದರ್ಭಾನುಸಾರ ಒಡೆಯ ಅಥವಾ ಅಧಿಭೋಗದಾರನು ನಿಕ್ಷೇಪ ಕಂಡುಬಂದುದು ತನ್ನ ಅರಿವಿಗೆ ಬಂದ ದಿನಾಂಕದಿಂದ ಒಂದು ತಿಂಗಳು ಮುಗಿಯುವುದಕ್ಕೆ ಮುಂಚೆ (1)ನೇ ಉಪಪ್ರಕರಣದ (ಬಿ) ಮತ್ತು (ಸಿ) ಖಂಡಗಳಲ್ಲಿ ಉಲ್ಲೇಖಿಸಲಾದ ವಿವರಗಳನ್ನು ನಿರ್ದಿಷ್ಟಪಡಿಸಿ ಜಿಲ್ಲಾಧಿಕಾರಿಗೆ ಲಿಖಿತ ನೋಟೀಸನ್ನು ನೀಡತಕ್ಕದ್ದು.

**4. ಜಿಲ್ಲಾಧಿಕಾರಿಯಿಂದ ಅಧಿಸೂಚನೆ:-** ಜಿಲ್ಲಾಧಿಕಾರಿಯು, 3ನೇ ಪ್ರಕರಣದ ಮೇರೆಗೆ ನೋಟೀಸನ್ನು ಸ್ವೀಕರಿಸಿದ ಮೇಲೆ ಮತ್ತು ಯಾವುದೇ ಸ್ಥಳದಲ್ಲಿ ನಿಕ್ಷೇಪವು ಕಂಡುಬಂದ ಬಗ್ಗೆ ಇತರ ಯಾವುದೇ ರೀತಿಯಿಂದ ಮಾಹಿತಿಯನ್ನು ಸ್ವೀಕರಿಸಿದ ಮೇಲೆ, ತಾನು ಯುಕ್ತವೆಂದು ಭಾವಿಸುವಂಥ ವಿಚಾರಣೆ ಏನಾದರೂ ಇದ್ದರೆ, ಅದನ್ನು ಮಾಡಿದ ತರುವಾಯ ಈ ಮುಂದಿನ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು, ಎಂದರೆ:-

(ಎ) ಅವನು ರಾಜ್ಯ ಸರ್ಕಾರಕ್ಕೆ, ನಿರ್ದೇಶಕನಿಗೆ ಮತ್ತು ನಿಯಮಿಸಲಾದ ಅಧಿಕಾರಿಗೆ ಸಾಧ್ಯವಾದಷ್ಟು ಮಟ್ಟಿಗೆ ಈ ಮುಂದಿನವುಗಳನ್ನು ನಮೂದಿಸಿ ಒಂದು ವರದಿಯನ್ನು ಕಳುಹಿಸತಕ್ಕದ್ದು,-

(i) ನಿಕ್ಷೇಪವನ್ನು ಕಂಡವನ ಹೆಸರು ಮತ್ತು ಇತರ ವಿವರಗಳು;

(ii) ನಿಕ್ಷೇಪವು ಕಂಡುಬಂದ ಭೂಮಿಯ ಒಡೆಯ ಮತ್ತು ಅಧಿಭೋಗದಾರನ ಹೆಸರು ಮತ್ತು ಇತರ ವಿವರಗಳು;

(iii) ನಿಕ್ಷೇಪದ ಸ್ವರೂಪ ಮತ್ತು ವಿವರಗಳು;

(iv) ನಿಕ್ಷೇಪದ ಅಂದಾಜು ಮೌಲ್ಯ;

(v) ನಿಕ್ಷೇಪವು ಕಂಡುಬಂದ ಸ್ಥಳ ಮತ್ತು ದಿನಾಂಕ;

(vi) ನಿಕ್ಷೇಪದ ಮೂಲನೆಲೆ ಮತ್ತು ಸುತ್ತುವರಿದ ಪ್ರದೇಶ;

(ಬಿ) ಅವನು ನಿಕ್ಷೇಪದ ಸ್ವರೂಪ, ಮೊಬಲಗು ಮತ್ತು ಅಂದಾಜು ಮೌಲ್ಯ ಮತ್ತು ಅಂಥ ನಿಕ್ಷೇಪವು ಕಂಡುಬಂದ ಸ್ಥಳ ಮತ್ತು ದಿನಾಂಕವನ್ನು ನಿರ್ದಿಷ್ಟಪಡಿಸಿ ನಿಯಮಿಸಲಾದ ರೀತಿಯಲ್ಲಿ ಒಂದು ಅಧಿಸೂಚನೆಯನ್ನು ಪ್ರಕಟಿಸತಕ್ಕದ್ದು ಮತ್ತು ನಿಕ್ಷೇಪವನ್ನು ಅಥವಾ ಅದರ ಯಾವುದೇ ಭಾಗವನ್ನು ಕ್ಲೇಮು ಮಾಡುವ ಎಲ್ಲ ವ್ಯಕ್ತಿಗಳನ್ನು, ಅಂಥ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ದಿನದಂದು ಅದರಲ್ಲಿ ನಿರ್ದಿಷ್ಟಪಡಿಸಿದಂಥ ವೇಳೆಯಲ್ಲಿ ಮತ್ತು ಸ್ಥಳದಲ್ಲಿ ಡೆಪ್ಯೂಟಿ ಕಮಿಷನರನ ಮುಂದೆ ಖುದ್ದಾಗಿ ಅಥವಾ ಏಜೆಂಟ್‌ನ ಮೂಲಕ ಹಾಜರಾಗಲು ಅಗತ್ಯಪಡಿಸತಕ್ಕದ್ದು. ಹಾಗೆ ನಿರ್ದಿಷ್ಟಪಡಿಸಿದ ದಿನವು ಅಂಥ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದ ತರುವಾಯ ನಾಲ್ಕು ತಿಂಗಳುಗಳಿಗಿಂತ ಮುಂಚಿನದಲ್ಲದ ಅಥವಾ ಆರು ತಿಂಗಳುಗಳಿಗಿಂತ ತರುವಾಯದ್ದಲ್ಲದ ದಿನವಾಗಿರತಕ್ಕದ್ದು;

(ಸಿ) ನಿಕ್ಷೇಪವು ಕಂಡುಬಂದ ಸ್ಥಳವು, ಕಂಡುಬಂದ ದಿನಾಂಕದಂದು ಕಂಡವನನ್ನು ಹೊರತುಪಡಿಸಿ, ಯಾವನೇ ಇತರ ವ್ಯಕ್ತಿಯ ಸ್ವಾಧೀನದಲ್ಲಿತ್ತೆಂದು ಅಥವಾ ಆ ವ್ಯಕ್ತಿಗೆ ಸೇರಿತ್ತೆಂದು ಡೆಪ್ಯೂಟಿ ಕಮಿಷನರನಿಗೆ ಕಂಡುಬಂದರೆ, ಡೆಪ್ಯೂಟಿ ಕಮಿಷನರನು ಅಂಥ ವ್ಯಕ್ತಿಗೆ ಮತ್ತು ಕಂಡವನಿಗೆ (ಬಿ) ಖಂಡದಲ್ಲಿ ಉಲ್ಲೇಖಿಸಲಾದ ಅಧಿಸೂಚನೆಯ ಒಂದು ಪ್ರತಿಯನ್ನು, ಅದನ್ನು ಪ್ರಕಟಿಸಿದ ತರುವಾಯ ಆದಷ್ಟು ಬೇಗನೆ ನೀಡತಕ್ಕದ್ದು.

**5. ನಿಕ್ಷೇಪದ ಹಕ್ಕಿನ ಮುಟ್ಟುಗೋಲು:-** 4ನೇ ಪ್ರಕರಣದ ಅಡಿಯಲ್ಲಿ ಅಧಿಸೂಚಿಸಲಾದ ನಿಕ್ಷೇಪಕ್ಕೆ ಅಥವಾ ಅದರ ಯಾವುದೇ ಭಾಗಕ್ಕೆ ನಿಕ್ಷೇಪವು ಕಂಡುಬಂದಂಥ ಸ್ಥಳದ ಒಡೆಯನೆಂದು ಅಥವಾ ಅನ್ಯಥಾ ಯಾವುದೇ ಹಕ್ಕನ್ನು ಹೊಂದಿರುವ ಮತ್ತು 4ನೇ ಪ್ರಕರಣದ ಮೇರೆಗೆ ಹೊರಡಿಸಿದ ಅಧಿಸೂಚನೆಯ ಮೂಲಕ ಅಗತ್ಯಪಡಿಸಿದಂತೆ ಹಾಜರಾಗದಿರುವ ಯಾರೇ ವ್ಯಕ್ತಿಯ ಅಂಥ ಹಕ್ಕು ಮುಟ್ಟುಗೋಲಾಗತಕ್ಕದ್ದು.

**6. ಡೆಪ್ಯೂಟಿ ಕಮಿಷನರ್‌ನಿಂದ ವಿಚಾರಣೆ:-** 4ನೇ ಪ್ರಕರಣದ ಅಡಿಯಲ್ಲಿನ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ದಿನದಂದು ಡೆಪ್ಯೂಟಿ ಕಮಿಷನರನು ನಿಕ್ಷೇಪವನ್ನು ತನ್ನ ಮುಂದೆ ಹಾಜರುಪಡಿಸುವಂತೆ ಮಾಡತಕ್ಕದ್ದು ಮತ್ತು ಹಾಜರಾಗುವ ವ್ಯಕ್ತಿಗಳಿಗೆ ಅಹವಾಲು ಹೇಳಿಕೊಳ್ಳಲು ಅವಕಾಶವನ್ನು ಕೊಟ್ಟ ತರುವಾಯ ಮತ್ತು ಅವಶ್ಯಕವಾಗಬಹುದಾದಂಥ ವಿಚಾರಣೆಯನ್ನು ಮಾಡಿದ ತರುವಾಯ,-

(ಎ) ಅಂಥ ನಿಕ್ಷೇಪವನ್ನು ಕಂಡ ವ್ಯಕ್ತಿ , ಅದು ಕಂಡುಬಂದ ಸ್ಥಳ ಮತ್ತು ಸಂದರ್ಭಗಳು; ಮತ್ತು

(ಬಿ) ಸಾಧ್ಯವಾದಷ್ಟು ಮಟ್ಟಿಗೆ, ಅಂಥ ನಿಕ್ಷೇಪವನ್ನು ಹುದುಗಿಸಿಟ್ಟ ವ್ಯಕ್ತಿ ಮತ್ತು ಹುದುಗಿಸಿಟ್ಟಂಥ ಸಂದರ್ಭಗಳು

-ಇವುಗಳನ್ನು ನಿರ್ಧರಿಸತಕ್ಕದ್ದು.

**7. ಕೆಲವು ಸಂದರ್ಭಗಳಲ್ಲಿ ನಿಕ್ಷೇಪವನ್ನು ಕ್ಲೇಮು ಮಾಡುವ ವ್ಯಕ್ತಿಯಿಂದ ದಾವೆ:-** (1) 6ನೇ ಪ್ರಕರಣದ ಮೇರೆಗೆ ವಿಚಾರಣೆ ಮಾಡಿದ ಮೇಲೆ ಡೆಪ್ಯೂಟಿ ಕಮಿಷನರನು, 4ನೇ ಪ್ರಕರಣದ ಅಡಿಯಲ್ಲಿನ ಅಧಿಸೂಚನೆ ಮೂಲಕ ಅಗತ್ಯಪಡಿಸಲಾದಂತೆ ಹಾಜರಾಗುವಂಥ ಮತ್ತು ನಿಕ್ಷೇಪವನ್ನು ಕ್ಲೇಮು ಮಾಡುವಂಥ ವ್ಯಕ್ತಿಯು ಅಥವಾ ಯಾವ ವ್ಯಕ್ತಿಯ ಅಧೀನದಲ್ಲಿ ಅಂಥ ವ್ಯಕ್ತಿಯು ಕ್ಲೇಮು ಮಾಡುವನೋ ಆ ಯಾರೇ ಇತರ ವ್ಯಕ್ತಿಯು ನಿಕ್ಷೇಪವು ಕಂಡುಬಂದ ದಿನಾಂಕಕ್ಕೆ ಮುಂಚೆ ಒಂದು ನೂರು ವರ್ಷಗಳೊಳಗೆ ಅದನ್ನು ಹುದುಗಿಸಿಟ್ಟಿದ್ದನೆಂದು ನಂಬಲು ಕಾರಣಗಳಿವೆಯೆಂಬುದಾಗಿ ಡೆಪ್ಯೂಟಿ ಕಮಿಷನರನು ಪರಿಗಣಿಸಿದರೆ, ಕ್ಲೇಮುದಾರನು ತನ್ನ ಹಕ್ಕನ್ನು ಸ್ಥಾಪಿಸಲು ಸಿವಿಲ್ ನ್ಯಾಯಾಲಯದಲ್ಲಿ ದಾವೆಯನ್ನು ಹೂಡಲು ತಾನು ಸಾಕಷ್ಟೆಂದು ಭಾವಿಸುವಂಥ ಅವಧಿಯವರೆಗೆ ಪ್ರಕರಣದ ಸುನಾವಣೆಯನ್ನು ಮುಂದಕ್ಕೆ ಹಾಕುವ ಆದೇಶವನ್ನು ಮಾಡತಕ್ಕದ್ದು.

(2) (1)ನೇ ಉಪಪ್ರಕರಣದ ಮೇರೆಗೆ ಹೂಡಿದ ದಾವೆಯಲ್ಲಿ ಕ್ಲೇಮುದಾರನು ನಿಕ್ಷೇಪದ ಮೇಲೆ ತನ್ನ ಹಕ್ಕನ್ನು ಸ್ಥಾಪಿಸಿದಲ್ಲಿ, ಸಿವಿಲ್ ನ್ಯಾಯಾಲಯವು ನಿಕ್ಷೇಪದ ಮೌಲ್ಯದ ನಾಲ್ಕನೇ ಒಂದರಷ್ಟನ್ನು ಮೀರದ ಮೌಲ್ಯವುಳ್ಳ ಪಾರಿತೋಷಕವನ್ನು ಕಂಡವನಿಗೆ ನೀಡಬಹುದು ಮತ್ತು ನಿಕ್ಷೇಪದ ಮೇಲೆ ತನ್ನ ಹಕ್ಕನ್ನು ಸ್ಥಾಪಿಸುವ ಕ್ಲೇಮುದಾರನು ಅದನ್ನು ಸಂದಾಯ ಮಾಡತಕ್ಕದ್ದು.

